# ಕೊರವಂಜಿ



ಮಾರ್ಚಿ ೧೯೪೪

ಮಾಸ ಪತ್ರಿಕೆ


ಸಂಪಾದಕರು :

ಶ್ರೀ|| ರಾ. ಶಿ.

ಚಿತ್ರಕಾರರು :

ಶ್ರೀ|| ಆರ್. ಕೆ. ಲಕ್ಷ್ಮಣ್.

ಬರಹಗಾರರು :

ಶ್ರೀ|| ನಾ. ಕಸ್ತೂರಿ

ಶ್ರೀ|| ಬೀರಣ್ಣ

ಶ್ರೀ|| ಬಿ. ಎಸ್. ರಾಮಾಚಾರ್ಯ

ಶ್ರೀ|| ಎ. ಕೇಶವ್



ಬಿಡಿ ಪತ್ರಿಕೆ -- ಕೇವಲ ಎರಡಾಣೆ


ಶ್ರೀ ನಗೆಯ ಮಾಸ ಪತ್ರಿಕೆ.

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.**

---

## ವಿಷಯಾನುಕ್ರಮಣಿಕೆ

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ

—

ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ

## ಚರ್ಮದ ಯೌವನವನ್ನು
## ಕಾಪಾಡುವುದು

ಮೈಸೂರು ಸ್ಯಾಂಡಲ್ ಸೋಪು ನಿಮ್ಮ ಚರ್ಮದ ಯೌವನವನ್ನು ಕಾಪಾಡುವುದಲ್ಲದೆ, ನಿಮ್ಮ ಅಂಗ ವರ್ಚಸ್ಸನ್ನೂ ಹೆಚ್ಚಿಸುವುದು. ಈ ಅಪೂರ್ವ ಸಾಬೂನಿನ ಒಂದು ಬಿಲ್ಲೆಯನ್ನು ಉಪಯೋಗಿಸಲು ನಿಮ್ಮನ್ನು ಆಹ್ವಾನಿಸುವೆವು.




# ಮೈಸೂರು ಸ್ಯಾಂಡಲ್ ಸೋಪ್


ಕೇಸರಿ ಕುಟೀರಂ ಲಿ., ಮದರಾಸು




# ನಿಮ್ಮ ಮನೆಗಳು ಮೈಸೂರು ದೀಪಗಳಿಂದ ಬೆಳಗಲಿ !

ಮೈಸೂರು ವಿದ್ಯುತ್ ಬಲ್ಬುಗಳು ಅತ್ಯಂತ ಪ್ರಕಾಶಮಾನವಾದುವು.

---

ಬಾಳಿಕೆ ಹೆಚ್ಚು !          ಬೆಲೆ ಸುಲಭ !!

ನಮ್ಮ ದೇಶದಲ್ಲಿಯೇ ತಯಾರಾದ ಸ್ವದೇಶಿ ಮಾಲು

---

## ಮೈಸೂರು ಲ್ಯಾಂಪ್ ವರ್ಕ್ಸ್, ಲಿ.

ಮಲ್ಲೇಶ್ವರಂ - - ಬೆಂಗಳೂರು




ಸಂಪುಟ ೨] ಕೊರವಂಜಿ—ಮಾರ್ಚಿ ೧೯೪೪ [ಸಂಚಿಕೆ ೧೨

# ಕು ಹ ಕಿ ಡಿ ಗ ಳು

ಬೇಡ ಬೇಡವಾದರೂ ಸ್ವಲ್ಪ ಸ್ವಲ್ಪವಾಗಿ ಹೆಚ್ಚು ಹೆಚ್ಚು ಕೇಳುವುದು.

ರೇಷನಿಂಗ್ ಆಚರಣೆ.

(ಮಾನ್ಯ ಮಿತ್ರರ ಸಲಹೆಯ ಮೇರೆ)

✤ ✤ ✤

ಹೆಂಗಸರೂ ಗಂಡಸರಷ್ಟೇ ಸಂಬಳಗಳನ್ನು ಪಡೆಯಬೇಕು ಎಂದು ಮಹಿಳಾ ಅಧ್ಯಕ್ಷಣಿಯರ ಉದ್ಗಾರ.

—ಏಕೆ—ಈಗ ಗಂಡಸರ ಸಂಬಳಗಳನ್ನೇ ಪಡೆಯುತ್ತಿರುವರಲ್ಲ!

✤ ✤ ✤

ಕಾಳಿದಾಸನ 'ಶಕುಂತಳಾ' ವನ್ನು ಚಲನಚಿತ್ರದಲ್ಲಿ ಆಡಿದ್ದಾರಂತೆ.

—ವಿಮರ್ಶೆ—ಕಾಳಿದಾಸನು ಸೋತ.—

✤ ✤ ✤

ವೈಸರಾಯ ವೇವೆಲ್ಲರ ಭಾಷಣವು ಮುಗಿಯಿತಂತೆ.

—ಈ ಪರ್ವತ ಪ್ರಸವಗಳು ವರ್ಷಕ್ಕೊಮ್ಮೆ ಆಗಲೇ ಬೇಕಲ್ಲ.

✤ ✤ ✤

ಮುಂಬರುವ ಶಾಂತಿ ಸಮ್ಮೇಳನದಲ್ಲಿ ನಡೆಯಬಹುದಾದ ವಾಗ್ಯುದ್ಧಗಳೇ ಮುಂದಿನ ಸಂಗ್ರಾಮಕ್ಕೆ ಕಾರಣವೆಂದು ಮಾನ್ಯ ಬಾತ್ಮೀದಾರರೊಬ್ಬರು ಬರೆಯುತ್ತಾರೆ.

✦ ✦ ✦

ನಿದ್ರೆ ಬಾರದಿದ್ದರೆ ರಾಮ ನಾಮ ಜಪಿಸಿದರೆ ನಿದ್ರೆ ಬರುತ್ತದೆಯಂತೆ.

—ಪಕ್ಕದ ಮನೆಯವರು ರಾಮನಾಮ ಜಪಿಸುವುದೇ ನಿದ್ರೆ ಬಾರದಿರುವುದಕ್ಕೆ ಕಾರಣವಾಗಬಹುದಲ್ಲವೇ?

✦ ✦ ✦

ಸಕ್ಕರೆ ಪ್ರಮಾಣವನ್ನು ಇನ್ನು ಮೇಲೆ ಹೆಚ್ಚು ಮಾಡುತ್ತಾರಂತೆ.

—ಹೊಟ್ಟೆ ಚುರುಗುಟ್ಟಿದರೂ, ಬಾಯಿಯಾದರೂ ಸಿಹಿಯಾಗಲಿ.—

✦ ✦ ✦

ಎಲೆ ಅಡಿಕೆ ಹಾಕಿಕೊಂಡರೆ ಸೊಕ್ಕು ಬರುತ್ತಂತೆ.—

—ಕೆಂಪುಟೆಯ ಕಾವಿಷ್ನಿಯರ ಸೊಕ್ಕು ಈಗರ್ಥವಾಯಿತು.—

✦ ✦ ✦

ಪ್ರಕೃತ ದಬ್ಬಾಳಿಕೆಗಾಗಿ ಟೀಕಿಸಲು, ಯಾವ ದೇಶದಲ್ಲಿ ಒಂದೇ ವ್ಯಕ್ತಿಯಿಲ್ಲವೋ ಆ ದೇಶವೇ ಸ್ವತಂತ್ರ ರಾಷ್ಟ್ರ.

✦ ✦ ✦

ಜೀವನ ನಡೆಸುವ ಖರ್ಚು ಎಂದಿನಂತೆಯೇ ಇದೆಯಂತೆ.

—ಹೌದು, ಇದ್ದ ಹಣವೆಲ್ಲಾ—

✦ ✦ ✦

ಜರಿ ರುಮಾಲಿನ ಅಧಿಕಾರಿಗಳು ಯಾವಾಗಲೂ ಜೇಬಿನಲ್ಲೇ ಕೈ ಇಟ್ಟಿರುತ್ತಾರೆ. ಏಕೆ ಎಂಬ ಪ್ರಶ್ನೆ—

—ಜೇಬಿನಲ್ಲಿಡಲು ಇನ್ನೇನಿರುತ್ತೆ ಅವರ ಹತ್ತಿರ.

✦ ✦ ✦

ಹತ್ತು ಲೇಖನಗಳು ಬಂದರೆ ಒಂದನ್ನು ಅಚ್ಚು ಹಾಕುತ್ತೇವೆ, ಎಂದು ಪತ್ರಿಕೆಯೊಂದರ ಉದ್ಗಾರ.

—ಅದೂ ಹೆಚ್ಚು.

———o———

# ಉರಿಗಾಳು

“ಕನ್ನಡಿಗರು ಪಂಪರನ್ನಾದಿಗಳನ್ನು ಮರೆತಾಗಲೂ ತನ್ನ ಕಾವ್ಯಗಳನ್ನು ಪಠಿಸುತ್ತಾರೆ” ಎಂದು ಒಬ್ಬರು ಮೊನ್ನೆ ಭುಜ ತಟ್ಟಿಕೊಂಡರು. ಹೌದು. ಪಂಪ ರನ್ನರನ್ನು ಮರೆತಾಗ……!

\+ \+ \+

“ಭವಿಷ್ಯತ್ತಿಗಾಗಿ ಉಳಿಸಿರಿ” ಎಂಬ ಪ್ರಚಾರಕ್ಕೂ, ಸೌದೆಯ ಬೆಲೆ ಏರುತ್ತಿರುವ ಪರಿಸ್ಥಿತಿಗೂ ಏನೂ ಸಂಬಂಧವಿಲ್ಲವಂತೆ.

\+ \+ \+

ಈಚೆಗೆ ಬೆಂಗಳೂರಿನ ನೀರಿಗೂ ಬೆಲೆ ಏರಿ ಬಿಟ್ಟಿದೆ……ಅಂದ್ರೆ, ಹಾಲು ರೂಪಾಯಿಗೆ ಎರಡು ಸೇರು.

\+ \+ \+

ಮೈಸೂರು ರೈಲ್ವೆಗೆ ಸೇರಿದ ಯಾವುದೋ ಸ್ಟೇಷನ್ನಲ್ಲಿ ಪ್ರಯಾಣಿಕರೊಬ್ಬರಿಗೆ ಟಿಕೆಟ್ ಹಣ ಲೆಕ್ಕಹಾಕಿ ಹಿಂದಕ್ಕೆ ಸಲ್ಲಬೇಕಾದ ಚಿಲ್ಲರೆಯನ್ನ ಕೊಟ್ಟರಂತೆ! ಎಲ್ಲರೂ ಆ ಸ್ಟೇಷನ್ನಿಗೇ ಹೋಗಿ ಟಿಕೆಟ್ ಕೊಂಡುಕೊಳ್ಳುವ ಸಂಭವ ಇರುವುದರಿಂದ ಅದರ ಹೆಸರನ್ನು ಸದ್ಯಕ್ಕೆ ಪ್ರಕಟಿಸುವುದಿಲ್ಲವಂತೆ.

\+ \+ \+

“ವಿದ್ಯಾರ್ಥಿಗಳು ಸದಾ ಕನ್ನಡದಲ್ಲೇ ಮಾತನಾಡಬೇಕೆಂಬ ಉಪದೇಶವೇನೋ ಸರಿ! ಆದರೆ, ನಂಟರಿಷ್ಟರನ್ನೂ ಹಳ್ಳಿ ಜನರನ್ನೂ ಹೀಯಾಳಿಸಿ ನಗಬೇಕಾದರೆ ಕನ್ನಡ ಸರಿ ಹೋಗುವದಿಲ್ಲವಲ್ಲಾ” ಎಂದು ಒಬ್ಬರು ನಮ್ಮನ್ನು ಕೇಳಿರುವರು.

\+ \+ \+

ಮಂತ್ರಿಗಳ ಪ್ರವಾಸ ಅಂದರೆ ಮಾವಿನ ಮರವೆಲ್ಲ ಬೋಳು.

\+ \+ \+

ಆಯುರ್ವೇದ ಕಾಲೇಜಿಗೆ ಒಂದು ಧ್ಯೇಯವಾಕ್ಯ ಬೇಕಂತೆ:
" ಋಣಂ ಕೃತ್ವಾ ಘೃತಂ ಪಿಬೇತ್ "—

✤ ✤ ✤

ಯಾವುದೋ ಒಂದು ಚಲನಚಿತ್ರ ಪ್ರದರ್ಶನಕ್ಕೆ ವರಮಾನ ಕಡಿಮೆ ಆಯಿತಂತೆ, ಬೆಂಗಳೂರಲ್ಲಿ. ಕೂಡಲೇ, " ವಿದ್ಯಾರ್ಥಿಗಳಿಗೆ ಪ್ರವೇಶವಿಲ್ಲ " ಅಂತ ಬೋರ್ಡು ಹಾಕಿದರಂತೆ.

✤ ✤ ✤

ಮೊನ್ನೆ ಹೆಗ್ಗಡದೇವನಕೋಟೆಯ ಹತ್ತಿರ ಒಬ್ಬಾಕೆ ನಾಲ್ಕು ಮಕ್ಕಳನ್ನು ಪ್ರಸವಿಸಿದಳಂತೆ. ನಿಖಿಲ ಕರ್ನಾಟಕ ಮಕ್ಕಳ ಕೂಟದವರು ಆಕೆಗೆ ಅಭಿನಂದನಾ ಸಂದೇಶವನ್ನು ಕಳುಹಿಸಿದರೋ ಏನೋ ತಿಳಿಯದು.

✤ ✤ ✤

ಕಾಫಿ ಔಷಧವಲ್ಲವೆಂದು ಆಯುರ್ವೇದದವರು ಹೇಳುತ್ತಾರೆ.
ಅದು ಕಾಫಿಯೇ ಅಲ್ಲ ಅಂತ ಕುಡಿದವರು ಹೇಳುತ್ತಾರೆ.

✤ ✤ ✤

ಕೈಹಿಡಿದ ಪತ್ನಿಯೊಂದಿಗೆ ಸುಖ ಸಂತೋಷದಿಂದ ಸಂಸಾರಮಾಡಿದ ಒಬ್ಬನನ್ನು ನಾಯಕನನ್ನಾಗಿ ಆರಿಸಿ ಪ್ರಸಿದ್ಧ ಸಾಹಿತಿಗಳು ಒಬ್ಬರು ಕಾದಂಬರಿ ಬರೆಯುತ್ತಿದ್ದಾರಂತೆ. ಅವರ ಪ್ರಸಿದ್ಧಿಗೆ ಗ್ರಹಣ ಪ್ರಾಪ್ತವಾಗದೆ ಇರಲಿ!

✤ ✤ ✤

---

ಶ್ರೀಯುತ ಕೇಸಿಯವರು ಬಂಗಾಳಾ ಗೌರ್ನರಾಗಿ ಹೊರಟುಹೋದುದು ಆಸ್ಟ್ರೇಲಿಯನ್ನರಿಗೆ ತುಂಬಾ ಸಂತೋಷಕರವಂತೆ.
—ಆದರೂ, ಹಾಗೆ ಹೇಳಬಹುದೆ?

* * *

♥

# ಕಷ್ಟ ವಿಚಾರಿಸುವುದು.

“ ಏನೋ ತುಂಬ ಕಷ್ಟದಲ್ಲಿದ್ದೀಯೆ ಎಂದು ಎರಡು ಸಮಾಧಾನದ ಮಾತು ಹೇಳಿ ಹೋಗೋಣ ಎಂದು ಬಂದೆವು, ನೋಡಪ್ಪಾ ...ಅವಳಿಗೋ ಮೈಯಲ್ಲೇ ಹುಷಾರಿಲ್ಲ. ಆದರೂ ಕೂಡ ‘ ಇಂಥಾ ಸಮಯದಲ್ಲಿ ನಮ್ಮ ಬಾಯಿಲಿ ನೋಡಿಕೊಂಡು ಕೂತರೆ ಆದೀತೆ? ಕೇವಲ ಸಮೀಪ ಬಂಧುಗಳಾದ ನಾವೇ ಹೋಗಿ ವಿಚಾರಿಸದಿದ್ದರೆ ಹೇಗೆ “ ಎಂದು ಹಟಹಿಡಿದು ಬಂದೇ ಬಂದಳು, ನೋಡು. ನಿಮ್ಮ ತಂದೆ ತೀರಿಹೋಗಿ ನಾಲ್ಕು ತಿಂಗಳಾಯಿತಲ್ಲವೆ? ಅಷ್ಟು ದಿವಸದಿಂದಲೂ ಬರಬೇಕೆಂದೇ ಪ್ರಯತ್ನ ಈಗ ಸಫಲಸಿತು ಅಂತೂ. ನಿನಗೆ ಇನ್ಯಾರಿದ್ದಾರೆ, ಪಾಪ ಹಿತಚಿಂತಕರು? ನಾವೂ ನಿನ್ನ ಕೈ ಬಿಟ್ಟುಬಿಟ್ಟರೆ ಹ್ಯಾಗೆ, ಹೇಳು ? ದುಃಖ, ಕಷ್ಟ ಇವುಗಳನ್ನು ಬಂಧುಗಳೆಲ್ಲಾ ಭಾಗಿಸಕೋಬೇಕಯ್ಯಾ, ಭಾಗಿಸಿಕೋಬೇಕು .. ಅದಕ್ಕೇ ಎಷ್ಟು ಕೆಲಸ ಇದ್ದರೂ ಬಿಟ್ಟು ಈ ದಿವಸ ಬಂದಿದ್ದು....ರಜ ಏನೋ ಇತ್ತು. ಆದರೂ ಇರುತ್ತಲ್ಲಾ, ಹಾಳು ಕೆಲಸಗಳು....ಡ್ರೈವರು ಬೇರೆ ಬರುವುದು ಹೊತ್ತಾಯಿತು—ಅಲ್ಲ, ನೀನು ನನ್ನ ಹೊಸ ಮೋಟಾರನ್ನು ನೋಡಿದೇಯೇನು ? ಫೋರ್ಡ್ ? ಅದಲ್ಲ—ಅದನ್ನು ಮಾರಿ ಆಗಲೇ ಇಪ್ಪತ್ತು ದಿವಸವಾಯಿತಲ್ಲ ...ನೋಡು, ಅದನ್ನು ಕೊಂಡದ್ದು ಈಗ ನಾಲ್ಕು ತಿಂಗಳ ಹಿಂದೆ—ನಿಮ್ಮಪ್ಪ ತೀರಿಹೋದ ದಿವಸಾನೇ ಅನ್ನು....ಆಗ ಮೂರು ಸಾವಿರ ಕೊಟ್ಟೆ ಅದಕ್ಕೆ. ಇನ್ನೂರು ರೂಪಾಯಿ ಖರ್ಚುಮಾಡಿ ಸುಣ್ಣ ಬಣ್ಣ ಮಾಡಿಸಿದೆ ಮದರಾಸಿನಿಂದ ಬಂದಿದ್ದ ಮಹಾಶಯನು ಒಬ್ಬ ಅದನ್ನು ನೋಡಿಬಿಟ್ಟು, ತನಗೆ ಖಂಡಿತ ಬೇಕೆಂದು ಹಠಹಿಡಿದು ಕೂತ. ನಾನು ಆರುಸಾವಿರ ಕೇಳಿದೆ. ಅವನು ನಾಲ್ಕೂವರೆ ಅಂದ, ಕಡೆಗೆ ಐದಕ್ಕೆ ಇತ್ಯರ್ಥವಾಯಿತು. ಏನೋ ಒಂದು ಎರಡುಸಾವಿರದಷ್ಟು ಗಿಟ್ಟಿತು ಅನ್ನು—ಗೊತ್ತಿದೆಯಲ್ಲ, ಶಾಖಾಯ, ಲವಣಾಯ....ಸರಿ, ಮನೆಯಲ್ಲಿ ಮೋಟಾರಿಲ್ಲದೆ ಹೇಗೆ ಎಂದು ದೊಡ್ಡ ಯೋಚನೆ ಹತ್ತಿಬಿಟ್ಟಿತು ಚಿಕ್ಕ ಗಾಡಿಯನ್ನು ನಮ್ಮ ಹುಡುಗ ಉಪಯೋಗಿಸುತ್ತಾನೆ—ನೀನು ಬಲೆಯಲ್ಲ, ಅವನು ಕಾಲೇಜಿಗೆ ಹೋಗುವುದಕ್ಕೆ, ಇದಕ್ಕೆಲ್ಲಾ ಒಂದು ಬೇಕೇಬೇಕು. ನಮಗೆ ಬಂತು ಪೀಕಲಾಟ. ಅದಕ್ಕೆ ಹಾಗೇ ನೋಡುತ್ತಿದ್ದೆ ಈಗಾಡಿ ಕಣ್ಣಿಗೆ ಬಿತ್ತು. ‘ ಕೊಡುತ್ತೀರಾ ? ’ ಎಂದು ಕೇಳಿದೆ ಮನುಷ್ಯ ಏನೋ ಸ್ವಲ್ಪ ತೊಂದರೆಯಲ್ಲಿದ್ದ. ಸಾಲಗೀಲ ಬೇಕಾಗಿತ್ತು. ಕಡೆಕಡೆ ಕೇವಲ ಹದಿನೆಂಟರ ಹಾಗೆ ಒಂದು ಕಡೆ ದುಡ್ಡು ಕೊಡಿಸಿಕೊಟ್ಟೆ. ಸರಿ, ಮೋಟಾರು ಎರಡು ಸಾವಿರಕ್ಕೆ ನನ್ನ ಪಾಲಿಗೆ ಬಂತು....ಇನ್ನೂ ಹೊಸದಾಗಿದೆ, ಅನ್ನು, ಗ್ಯಾಲನ್ನಿಗೆ ಮೂವತ್ತೈದು ಮೈಲಿ ಓಡುತ್ತೆ. ಆದರೂ ಈ ಕಷ್ಟಕಾಲದಲ್ಲಿ ಮೋಟಾರು ಗೀಟಾರು ಇಟ್ಟುಕೊಳ್ಳುವುದು ಬಹಳ ಫಜೀತಿ ಕೆಲಸ, ನೋಡು. ಸಾಮಾನುಗಳು ಸಿಕ್ಕುವುದಿಲ್ಲ; ಪೆಟ್ರೋಲ್ ದುರ್ಲಭ ನಮ್ಮ ಕಷ್ಟ ಏನು ಅಂತೀಯ !....ಆದರೆ ನನಗೇನೋ ಸದ್ಯಕ್ಕೆ ಯಾವನೋ ಒಬ್ಬ ಗಂಟು

ಬಿದ್ದಿದ್ದಾನೆ ಒಂದಷ್ಟು, ಬಿಟ್ಟೆ ಪೆಟ್ರೋಲ್ ಹೊಡೀತೀನಿ ಅಂದುಕೋ....ಅದರೂ ಇದನ್ನೆಲ್ಲಾ ಇಟ್ಕೊಳ್ಳೋದು ದುಬಾರೀನೆ....ಮುಖ್ಯ ಶನಿಕಾಟ ನೋಡು, ಇದೆಲ್ಲ ಇಲ್ಲದೇ ಇದರೆ, ಹೀಗೆ ಒಂದು ಮೋಟಾರು ಕೂಡ ಸರಿಯಾಗಿ ಮೂರು ತಿಂಗಳಾದರೂ ನನ್ನ ಹತ್ತಿರ ನಿಲ್ಲಲ್ಲೀಡನೆ? ಈಗಾಗಲೇ ಐದು ಗಾಡಿಗಳಾಗಿ ಹೋಯಿತು ನೋಡು. ನನ್ನ ಹತ್ತಿರ ಬಂದು ಹೋದದ್ದು....ನಷ್ಟನೆ? ನಷ್ಟ ಎಂದೇನೂ ಹೇಳೋಹಾಗಿಲ್ಲ. ಅನ್ನು ... ಆ ಮೊದಲನೆ "ಮಾರಿಸ್" ಮಾರಿದಾಗ ಮುನ್ನೂರು ರೂಪಾಯಿ ಲಾಭ, ಎರಡನೆ "ಎಸ್ಟಿನ್" ಮಾರಿದಾಗ ಎಂಟುನೂರು ಲಾಭ, "ಹವರ್ಲೆ" ಮಾರಿದಾಗ ಸಾವಿರದಿನ್ನೂರು, "ಸ್ಟಾಂಡರ್ಡ್" ನಿಂದ ಎರಡುಸಾವಿರ. ಸರಿ, ಮೊನೆ ಕೊಟ್ಟೆ "ಫೋರ್ಡ್" ನಿಂದ ಇನ್ನೊಂದು ಎರಡ ಸಾವಿರ, ಅಂತೂ ಎಲ್ಲಾ ಒಂದು ಆರುಸಾವಿರದ ಮುನ್ನೂರು—ಖರ್ಚು ಕಳೀತಾ ಆರ ಸಾವಿರ ಎಂದಿಟ್ಕೋ—ಇಷ್ಟು ಲಾಭ ಏನೋ ಬಂತು, ಆದರೂ ತಾಪತ್ರಯ ನೋಡು ಈಗ ಇದೇ ಗಾಡೀನ ಏತಕೆ, ಕೇಳುತಿದ್ದಾರೆ ನಾನು ಒಂಭತ್ತು ಎಂದು ಕೂತಿದ್ದೇನೆ. ಅಂತೂ ಈ ಶನಿಕಾಟದಲ್ಲಿ ಏನೇನು ಆಗಬೇಕೋ ಗೊತ್ತಿಲ್ಲ. ಇದೂ ಯಾವತ್ತು ಹೊರಟುಹೋಗುತ್ತೋ! ಅಂತೂ ಯಾವುದೂ ಸ್ಥಿರವಲ್ಲ ನೋಡು, ಈ ಪ್ರಪಂಚದಲ್ಲಿ... ಹ್ಯಾಗಿದ್ದವನು ನೀನು, ಹ್ಯಾಗಾಗಿಬಿಟ್ಟಿದ್ದಿ ಈಗ ...ಅದಕ್ಕೇ ಎರಡು ಸಮಾಧಾನದ ಮಾತು ಹೇಳಿ ಹೋಗೋಣ ಅಂತ ಬಂದಿದ್ದಪ್ಪಾ! ಆ ನಿಮ್ಮ ದೊಡ್ಡಮನೇನೂ ಹೊರಟುಹೋಯಿತೊ ಸಾಲಕ್ಕೆ? ಚೆನ್ನಾಯಿತು. ಈ ಹಾಳು ಕೊಂಪೆಯಲ್ಲಿ ಬಂದು ಸೇರಿಕೊಂಡಿದ್ದೀಯಲ್ಲಾ, ಇಲ್ಲಿ ಹ್ಯಾಗೆ ಜೀವಿಸುತ್ತೀಯೋ ನಾನು ಕಾಣೆ ......

ಅಲ್ಲ, ನನ್ನ ಮನೆ ನೋಡಿದ್ದೀಯಲ್ಲ. ನೀನು ಯಾವುದು. ಆ ಎರಡನೇ ರಸ್ತೆ ಮನೆಯಲ್ಲ ಅದನು ಆಗಲೇ ಆ ಫಿಲ್ ಕಂಪೆನಿಯವರಿಗೆ ಹದಿನೈದು ಸಾವಿರಕ್ಕೆ ಮಾರಿ ಆರು ತಿಂಗಳಾಯಿತಲ್ಲ! ನಾನು ಕೊಟ್ಟದ್ದೆ? ಅದಕ್ಕೇ? ಏಳು ಸಾವಿರ. ನಾನು ಕೊಂಡುಕೊಂಡಾಗ ಒಂದಷ್ಟು, ಖರ್ಚುಮಾಡಿ ಬಚ್ಚಲು ಗಿಚ್ಚಲು ಸರಿ ಮಾಡಿಸಿದೆ. ಇಪ್ಪತ್ತೈದು ರೂಪಾಯಿ ಬಾಡಿಗೆ ಬರುತ್ತಿತ್ತು. ಆಮೇಲೆ ಮೂವತ್ತು ಮಾಡಿದೆ; ನಂತರ ಅವನು ಮೂವತ್ತೈದಕ್ಕೆ ಒಪ್ಪಿಕೊಳ್ಳದ್ದರಿಂದ ನೋಟೀಸ್ ಕೊಟ್ಟು, ಬಿಡಿಸಿ ನಲವತ್ತಕ್ಕೆ ಬಾಡಿಗೆಗೆ ಕೊಟ್ಟೆ. ಹನ್ನೆರಡು ಸಾವಿರಕ್ಕೆ ಅವರೇ ಕೇಳಿದರು. ಆದರೆ ಆ ಫಿಲ್ ಕಂಪೆನಿಯವರು ಹದಿನೈದು ಕೊಡುತ್ತೇನೆಂದರು. ಸರಿ, ಕೊಟ್ಟುಬಿಟ್ಟೆ. ಹೋಗಲಿಬಿಡು ...ಆ ಮನೆ, ಏಳಿಗೆಯಾಗುವಂಥಾ ಮನೆ ಅಲ್ಲ ಎಂದು ಎಲ್ಲರೂ ಹೇಳುವುದಕ್ಕಾರಂಭಿಸಿದರು—ಅದಕ್ಕೇ ಹದಿನೈದು ಎಂದಾಗ ಒಡನೆ 'ಹೂ' ಅಂದದ್ದು! .. ಮನೆ ಏನಾಗಿತ್ತು, ಅಂತೀಯಾ? ಜೇನುಕಟ್ಟೆ ಬಿಟ್ಟಿತ್ತಯ್ಯ, ಮನೆಯಲ್ಲಿ, ಜೇನುಕಟ್ಟೆಬಿಟ್ಟಿತ್ತು!... ಬಹಳ ಕೆಟ್ಟದ್ದಂತೆ ನೋಡು ಅದು! ...ಹೌದು, ನನಗೇನೋ ಎಂಟುಸಾವಿರ ಲಾಭ ಬಂದಹಾಗಾಯಿತು—ಅಷ್ಟರವರೆಗೆ ನನಗೆ ಒಳ್ಳೆಯದೇ ಆಯಿತು ಅನ್ನು....ಫಿಲ್ಮ್ ಕಂಪೆನಿಯವರಿಗೇ? ಅವನು ಆ ಮನೆ ತೆಗೆದುಕೊಂಡಮೇಲೆ ಸಂಪಾದಿಸಿದ ದುಡ್ಡಿನಲ್ಲಿ ತನ್ನದೇ ಒಂದು

ಸಿನೀಮಾನೇ ಕಟ್ಟಿಸಿಬಿಟ್ಟಿದ್ದಾನೆ !... ಆದರೂ ಕೇಳುವ್ರದಕ್ಕಿಲ್ಲ, ಈ ಜೇನು ಕಟ್ಟಿದ ಮನೆಗಳು ಅಂದರೆ....ಅದು ಹೋಗಲಿ, ಆ ಮನೆ ಕೊಟ್ಟಮೇಲೆ, ಮಾರನೆಯ ರಸ್ತೆಯಲ್ಲಿ ಹನ್ನೊಂದು ಸಾವಿರಕ್ಕೆ ಮತ್ತೊಂದು ಕೊಂಡುಕೊಂಡೆ. ಕೊಂಡು ಕೊಂಡ ಮಾರನೆಯ ದಿನವೇ ಒಬ್ಬ ಮಾರ್ವಾಡಿ ಹದಿಮೂರು ಕೊಡುತ್ತೇನೆಂದ. ಒಬ್ಬ ಗುಜರಾತಿ ಹದಿನೈದು ಅಂದ. ಮದರಾಸಿನವರು ಹದಿನೇಳು ಅಂದರು. ಬೊಂಬಾಯಿನ ವರ್ತಕನೊಬ್ಬ ಇಪ್ಪತ್ತಕ್ಕೆ ಕೇಳುತ್ತಿದ್ದಾನೆ! ನಾನು ಇಪ್ಪತ್ತೈದು ಎಂದು ಯಾರಾದರೂ ಬಾಯಿ ಬಿಟ್ಟರೆ ಆಗ ನೋಡಿಕೊಳ್ಳೋಣ ಎಂದಿದ್ದೇನೆ.... ಈಗ ಅಲ್ಲಿ ಯಾರಿದ್ದಾರೆ ಅಂತೀಯಾ? ಒಬ್ಬ ಪಂಜಾಬಿ ಕಂಟ್ರಾಕ್ಟರು, ಒಬ್ಬ ಮಿಲಿಟರಿ ಅಧಿಕಾರಿ ಇಬ್ಬರೂ ಅರ್ಧರ್ಧ ಹಂಚಿಕೊಂಡಿದ್ದಾರೆ.. ತಲಾ ತಿಂಗಳಿಗೆ ನೂರಿಪ್ಪತ್ತೈದು ಕೊಡುತ್ತಾರೆ. ಏನೋ ಈ ಕಷ್ಟಕಾಲದಲ್ಲಿ ಇನ್ನೂರೈವತ್ತು ಅಕ್ಕಿ ಬೇಳೆಗೆ ಆಗುತ್ತೆ ಅನ್ನು!... ನಾನು ಈಗಿರುವುದೇ? ಅಲ್ಲೇ, ಕೆಲಸದವರು ಕೊಟ್ಟಿರುವ ಮನೆಯಲ್ಲಿ.. ಬಾಡಿಗೆಯೇ? ನಾನು ಅದಕ್ಕೆ ಬಾಡಿಗೆ ಕೊಟ್ಟೇನೆ? ಎಲ್ಲಿಯಾದರೂ ಉಂಟೆ? ಅವರೇನೋ ಶೇಕಡಾ ಐದರಷ್ಟು ಕೊಡಬೇಕು ಅಂದರು. ಆದರೆ ಜಗಳ ಹಿಡಿದು ತಪ್ಪಿಸಿದೆ! ಈಗ ಅದು “ಫ್ರೀಕ್ವಾರ್ಟರ್ಸ್”!.. ಇದಂತೂ, ಏನೇ ಆಗಲಿ, ನೋಡು, ದುರದೃಷ್ಟ ಅಂದರೆ ನನ್ನದೀಗ!....ಅಲ್ಲ, ಸ್ವಂತಮನೆ ಇಟ್ಟುಕೊಂಡು ನಮ್ಮ ಮನೆಯಲ್ಲಿ ನಾವಿರುವುದಕ್ಕೆ ಆಗಿಲ್ಲವಲ್ಲ, ಏನು ಶನಿಕಾಟ ಇದು!,...ಎಲ್ಲಾ ಹೇಳಿ ಫಲವೇನು, ಇರಬೇಕು ಅದಕ್ಕೆಲ್ಲ ಹಣೆ ಬರಹ.

ಅಯ್ಯೋ ಇದೇನು, ಈ ತಿಂಡಿ ಕಾಫಿ? ಈ ಕ್ಷಾಮಕಾಲದಲ್ಲಿ ಇದೆಲ್ಲಾ ನೀನು ಇಟ್ಟುಕೊಳ್ಳಬಾರದಪ್ಪಾ—ಅದೂ ಈಗ ನಿನಗೆ ಬಂದಿರುವ ಕಷ್ಟದಲ್ಲಿ.... ಏನೋ ಹೇಗಿದೀಯ ಎಂದು ನೋಡಿಕೊಂಡು ಒಂದೆರಡು ಸಮಾಧಾನದ ಮಾತು ಹೇಳಿ ಹೋಗೋಣ ಎಂದು ಬಂದರೆ, ಈ ಉಪಚಾರಗಳೆಲ್ಲ ಏಕಪ್ಪಾ. ಈ ಉಪ್ಪಿಟ್ಟಿಗೆ ಸ್ವಲ್ಪ ಹುಳಿಸಾಲದು ನಿಂಬೆ ಹಣ್ಣಿದೆಯೆ? ನನಗೆ ಡಾಕ್ಟರು ನಿಂಬೇರಸ ಜಾಸ್ತಿ ತೆಗೆದುಕೊಳ್ಳಬೇಕು ಎಂದು ಹೇಳಿದ್ದಾರೆ. ಈ ನಿಂಬೇಹಣ್ಣು ಎಲ್ಲಿಸಿಕ್ಕಿತು, ನಿನಗೆ? ಎಷ್ಟೊಂದು ರಸ ಇದೆ!...ಇನ್ನೂ ಇದೆ ಅಂತೀಯಾ?... ಹಾಗಾದರೆ ಒಂದು ಹತ್ತು ಹಣ್ಣು ತೆಗೆದು ಮೋಟಾರಿನಲ್ಲಿಡಿಸು, ಬಹಳ ಚೆನ್ನಾಗಿದೆ ಹಣ್ಣು. ಏನೋಪ್ಪ, ಪಾಪ, ಈ ಕಷ್ಟಕಾಲದಲ್ಲಿ ನೀನು ಹೇಗೆ ಎಲ್ಲವನ್ನು ನಡೆಸಿಕೊಂಡು ಹೋಗುತ್ತಿದ್ದೀಯೋ!....ದೇವರೇ ಸಹಾಯ ಮಾಡಬೇಕು!.. ಅಲ್ಲ, ನೀನು ಅಕ್ಕೀಗೆ ಏನು ಮಾಡುತ್ತಿದ್ದೀಯ? ರೇಷನ್ ಡಿಪೋನಲ್ಲಿ ತರಿಸುತ್ತೀಯಾ? ನೋಡು, ನನಗೆ ಇದರ ಜ್ಞಾಪಕವೇ ಬರಲಿಲ್ಲ—ನಮ್ಮ ಛತ್ರವನ್ನೆಲ್ಲಾ ಅಲ್ಲಿಯೇ ಮಾರಿಬಿಟ್ಟೆ, ಇಲ್ಲದಿದ್ದರೆ ನಿನಗೂ ಸ್ವಲ್ಪ ಹಾಕಿಸಿಕೊಂಡು ಬರಬಹುದಾಗಿತ್ತು....ಒಳ್ಳೆ ಸಣ್ಣಕ್ಕಿ ಹಾಕಿಸಿದ್ದೆ, ಈಸಲ....ಫಸಲೂ ಚೆನ್ನಾಗಿತ್ತು....ಒಳ್ಳೆ ದರವೂ ಸಿಕ್ಕಿತು....ಅದಕ್ಕೇ ಎಲ್ಲೋ ಸ್ವಲ್ಪ ಇಟ್ಟುಕೊಂಡು ಎಲ್ಲಾ ಮಾರಿಬಿಟ್ಟೆದ್ದು .... ನಿನ್ನ ವಿಚಾರವೇ ಮರೆತು ಹೋಯಿತು ನೋಡು....

ಈ ತಿಂಡಿ ತಿಂದದ್ದು ಹೊಟ್ಟೆ ಭಾರವಾಗಿ ಹೋಯಿತು !....ಈ ದಿವಸ ನಮ್ಮ ಹುಡುಗನ ಹುಟ್ಟಿದ ಹಬ್ಬ ಎಂದು ಚಿರೋಟಿಮಾಡಿಸಿದ್ದೆ—ಬಹಳ ಚೆನ್ನಾಗಿತ್ತು ನೋಡು, ನಾಲ್ಕೈದು ಹೊಡೆದುಬಿಟ್ಟೆ !...ಜ್ಞಾಪಕ ಬಂದಿದ್ದರೆ ಕಾಗದದಲ್ಲಿ ಒಂದಷ್ಟು ನಿಮ್ಮ ಮಕ್ಕಳಿಗೋಸ್ಕರ ಕಟ್ಟಿಸಿಕೊಂಡು ಬರಬಹುದಾಗಿತ್ತು—ಆದರೆ ಹಾಳು ಬುದ್ಧಿಯೇ ಓಡುವುದಿಲ್ಲ...ಅವಳಾದರೂ ಹೇಳಬೇಡವೇ ? ಅವಳಿಗೂ ಬಲು ಮರವು ನೋಡು ...ಕೀರೂ ಸಹ ಬಲು ಚೆನ್ನಾಗಿತ್ತು....ಹೋಗಲಿ, ಬಿಡು ಏನೋ ನಿನ್ನ ಕಷ್ಟದಲ್ಲಿ ನೀನು, ನಾವು ಕೀರು ಚಿರೋಟಿ ತಂದು ಕೊಡೋದು ಏನು ಚೆನ್ನ ಹೇಳು ?...ಇದೇನು, ಗಡಿಯಾರ ನೋಡುತ್ತಿದ್ದಿ ? ಎಲ್ಲಿಯೋ ಹೋಗಬೇಕೆ ?....ಆಗಲಪ್ಪ ... ಹೊರಡು, ನೀನು.... ನಾನೂ ಒಳಗೆ ಹೋಗಿ ನಿಮ್ಮ ತಾಯಿಯ ಹತ್ತಿರ ಎರಡು ಮಾತನಾಡಿ ಆಮೇಲೆ ಮನೆಗೆ ಹೊರಡುತ್ತೇನೆ. ಪಾಪ ನಮ್ಮನ್ನೆಲ್ಲಾ ಬೆಳೆಸಿದವಳೇ ಆಕೆ. ಹೀಗೇ ಒಂದೆರಡು ಸಮಾಧಾನದ ಮಾತುಗಳನ್ನು ಹೇಳಿದರೆ, ಆಕೆಗೂ ಮನಶ್ಶಾಂತಿಯುಂಟಾಗಬಹುದು ... ನಮ್ಮವಳು ಒಳಗೆ ಮಾತಾಡುತ್ತಿದ್ದಾಳೆ ಎಂದು ತೋರುತ್ತೆ....ನಾನೂ ಹೋಗಿ ನೋಡುತ್ತೇನೆ .... ಹಾಗಾದರೆ ಹೊರಡುತ್ತೀಯಾ ? ... ಹೋಗುವಾಗ ಬಾಗಿಲಿನಲ್ಲಿರುವ ನನ್ನ ಹೊಸ ಮೋಟಾರನ್ನು ನೋಡಿಕೊಂಡು ಹೋಗು....ಬಹಳ ಅಂದವಾಗಿದೆ.

—ಬೀರಣ್ಣ.

---



"ನೋಡಿ ಸ್ವಾಮಿ, ನನ್ಮಗ ನಾಲ್ಕು ವರ್ಷ ಆಗ್ಲಿ ೨೦ ತ್ರ ವರ್ಗೆ ಒಂದು, ಎರಡು ಹೇಳ್ತಾನೆ."

"ಪರವಾಗಿಲ್ಲ, ೨೦ ವರ್ಷಕ್ಕೆ ೧೦೦ರ ವರ್ಗೆ ಕಲಿತಾನೆ.—"

# ವಿದುರಾತಿಥ್ಯ*

ಕೌರವ ಪಾಂಡವರಲ್ಲಿ ಸಂಧಾನ ನಡೆಸಲು ಶ್ರೀಕೃಷ್ಣ ಹಸ್ತಿನಾಪುರಕ್ಕೆ ಬಂದ. ಬಡಭಕ್ತ ವಿದುರನ ಕುಟೀರದಲ್ಲಿ ತಂಗಿದ. ಪ್ರೇಮದ ಹೊನಲು, ಹಾಲಿನ ಕೋಡಿ ಹರಿಯಿತು. ಶ್ರೀಕೃಷ್ಣ ತೃಪ್ತನಾದ.

ಈ ಕತೆಯನ್ನು ಎಲ್ಲರೂ ಬಲ್ಲರು. ಆದರೆ...............

* * *

ದಾಯಾದಿ ಮನೆತನಗಳೆರಡರ ಸಂಧಾನದ ವಕೀಲಿ ವಹಿಸಿ, ಸಿರಿಯೂರಿನ ಸುಪ್ರಸಿದ್ಧ ಲಾಯರ್ ಕೃಷ್ಣಮೂರ್ತಿರಾಯರು ಹಿರಿಯೂರು ಬಸ್ ಸ್ಟ್ಯಾಂಡಿನಲ್ಲಿ ಇಳಿದರು. ಇವರ ಒಲವು ನ್ಯಾಯ ಧರ್ಮ ಇವುಗಳ ಕಡೆ ಇತ್ತು; ಕೃಷ್ಣನ ಒಲವು ತನ್ನ ಪಂಚಪ್ರಾಣ ಪಾಂಡವರ ಕಡೆಗಿದ್ದಂತೆ ಇವರನ್ನು ಬುಟ್ಟಿಗೆ ಹಾಕಿಕೊಳ್ಳಲು ಉಪಚರಿಸಿ, ತೀರ್ಪು ತಮ್ಮ ಕಡೆ ಬರುವಂತೆ ಮಾಡಲು ಸಕಲ ಸಿದ್ಧತೆಗಳಿಂದ "ಕೌರವ ಸೋದರರು" ಹವಣಿಸಿದ್ದರು ಆದರೆ, ಕೃಷ್ಣಮೂರ್ತಿರಾಯರು ಬಲೆಗೆ ಬೀಳಲಿಲ್ಲ. ತಾವು ನಿಷ್ಪಕ್ಷಪಾತಿಗಳು—ಯಾರ ಮನೆಯಲ್ಲಿ ಕಾಲಿಟ್ಟರೂ ಬೇರೆಯವರಿಗೆ ಅಪನಂಬಿಕೆಯಾಗುವುದೆಂದು ಗ್ರಹಿಸಿದ್ದರು. ನೇರವಾಗಿ ಬಸ್ ಸ್ಟ್ಯಾಂಡ್ ಬಳಿಯಲ್ಲಿಯೇ ಇದ್ದ ಭಕ್ತಾಗ್ರಣಿ ವಿದುರನ ನಿವಾಸಕ್ಕೆ ನುಗ್ಗಿದರು.

ವಿದುರ ಕೃಷ್ಣನ ಭಕ್ತ. ಅವನ ನಿವಾಸ "ಶ್ರೀಕೃಷ್ಣ ಭವನ' ವಿದುರನಿಗೆ ನಿಷ್ಕಲ್ಮಶ ಹೃದಯವಿದ್ದಿರಬಹುದು; ಹಿರಿಯೂರಿನ ವಿದುರನ ಸಂಕೇತ 'ಶುಚಿ-ರುಚಿ' ಭವನದ ಹೆಸರೇ ಶ್ರೀಕೃಷ್ಣನಲ್ಲಿರುವ ಅತುಲ ಭಕ್ತಿಯನ್ನು ಪ್ರದರ್ಶಿಸುತ್ತಿತ್ತು. ಪಟ್ಟಣದ ಮಧ್ಯದಲ್ಲಿ ಅನುಕೂಲವಾದ ಸ್ಥಳ. ಅಚ್ಚುಕಟ್ಟಾದ ವ್ಯವಸ್ಥೆ ಸುತ್ತಲೂ ರಮ್ಯವಾದ ಉದ್ಯಾನವನ. ಶ್ರೀಕೃಷ್ಣನ ಮನ ಮೆಚ್ಚಿಸಲು ಮುಂಜಾನೆಯಿಂದ ನಡುರಾತ್ರಿಯವರೆಗೆ ಸುಮಧುರ ಸಂಗೀತದ ಏರ್ಪಾಟು: ರೇಡಿಯೋ ಮೂಲಕ; ಗ್ರಾಮಾಫೋನ್ ಮೂಲಕ. "ಕೃಷ್ಣಾ ನೀ ಬೇಗನೆ ಬಾರೋ" ಮತ್ತು "ಬಾರೆಲೊ ದೇವನೆ ಶ್ರೀಹರಿ" ವಕೀಲರನ್ನು ಸ್ವಾಗತಿಸಿದುವು. "ನಾನ್ಯಾಕೆ ಬಡವಾನೊ, ನಾನ್ಯಾಕೆ ಪರದೇಶಿ"—ನೀವು ಬಂದ ಮೇಲೆ—ಎಂದು ವಿದುರನು ತಾನು ಪರಮಾತ್ಮನನ್ನು ದೃಢವಾಗಿ ನಂಬಿರುವುದನ್ನು ಅರುಹಿದನು. "ನೀನ್ಯಾಕೊ ನಿನ್ನ ಹಂಗ್ಯಾಕೋ, ನಿನ್ನ ಜೇಬಿನ ಬಲ ಒಂದಿದ್ದರೆ ಸಾಕೊ" ಎಂದೂ ಹೇಳಿದನೋ, ಏನೊ! ಕೃಷ್ಣಮೂರ್ತಿರಾಯರು—ಭಕ್ತಪರಾಧೀನ ಕೃಷ್ಣನಂತೆ—ಈ ಸ್ವಾಗತದಿಂದ ಸುಪ್ರೀತರಾದರು

---

* ವಿದುರಾಶ್ವತ್ಥವಲ್ಲ. ಹಾಗೂ ಈ ಲೇಖನ 'Condensed Milk'ನ ಜಾಹಿರಾತಲ್ಲ.

ಮಜ್ಜನನಾಯಿತು. ಉಪಚಾರದ ವ್ಯವಸ್ಥೆಯಲ್ಲಿ ವಿದುರ ವಿಶೇಷ ಮುತುವರ್ಜಿ ವಹಿಸಿದ್ದನು. ವಕೀಲರಿಗೆ ತಿಂಡಿ ಬೇಕಿರಲಿಲ್ಲ; ತೀರ್ಥ ಬೇಕಾಗಿತ್ತು. ಬೇಕಾದದ್ದು ಕಾಫಿ ವಿದುರನ ದುರ್ದೆಸೆ. ಜಾನುವಾರುಗಳ ಕಾಯಿಲೆಯಿಂದ ಹಾಲಿನ ಸರಬರಾಜು ಸಮರ್ಪಕವಿರಲಿಲ್ಲ ವಿದುರ ಬಡವ; ಆದರೆ, ನಿರಹಂಕಾರಿ. ಇದ್ದ ಸ್ವಲ್ಪ ಹಾಲು ಹಾಕಿ ಕಾಫಿ ಮಾಡಿಕೊಟ್ಟ. "ಪತ್ರಂ ಫಲಂ ತೋಯ" ದಿಂದ ಪರಮಾತ್ಮ ತೃಪ್ತನಾಗಬೇಡವೆ? ಕಾಫಿ ಅತ್ಯಾವಶ್ಯಕವೆಂದೂ, ಅನೇಕ ಬಾರಿ ಬೇಕಾಗಬಹುದೆಂದೂ ಅವರ ಮುಖಾರವಿಂದ ಸೂಚನೆಕೊಟ್ಟಿತು. "ಮನ್ನಿಸೆನ್ನ ಪರಾಧ" ಗ್ರಾಮಾಫೋನ್ ಪ್ರಾರಂಭಿಸಿತು. ಪರಮಾತ್ಮ ಸಂತೋಷಗೊಂಡು ವಿದುರನ ಕಡೆಗೆ ಕೃಪಾದೃಷ್ಟಿ ಬೀರಿದ, "ಕಂಡು ಕಂಡು ನೀ ಎನ್ನ ಕೈಬಿಡುವರೇ" ಎಂಬ ಆರ್ತನಾದ ಹೊರಟ ಮೇಲೆ. "ಭಕ್ತವತ್ಸಲನೆಂಬೊ ಬಿರುದು ಪೊತ್ತ ಮೇಲೆ" ಎಂಬ ನುಡಿ ತೂರಟಾಗ, ವಿದುರ ಸಣ್ಣದೊಂದು ಡಬ್ಬಿ ಹೊರಗೆ ತೆಗೆದ. ಒಡೆದು ಬಿಸಿ ನೀರಿಗೆ ಹಾಕಿದ. ಏನಾಶ್ಚರ್ಯ! ಪರಮಾತ್ಮನ ಅಗಾಧ ಲೀಲೆ! ಕ್ಷಣಮಾತ್ರದಲ್ಲಿ ಹಾಲಿನ ಕೋಡಿ ಹರಿಯಿತು! ಕಾಫಿ ಕೊಳಗವನ್ನು ತುಂಬಿತು! "ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ" ಎಂಬ ರೇಡಿಯೋ ಪಲುಕಿತು. ವಕೀಲರು ಹೊಸ ಚೈತನ್ಯ ಪಡೆದರು.

ಅಂದಿ ಮೇಲೆ ದಾಯಾದಿಗಳ ಪಾಡು ನಿಮಗೆ ತಿಳಿಯಿತಲ್ಲ—

—ಕೋ. ರಾ. ಕೃ.



ಪೌರಸಭಾ ಚುನಾವಣೆಯಿಂದ ನಗರಕ್ಕೆ ಏನೂ ಉಪಯೋಗವಿಲ್ಲ ಎಂದು ಒಬ್ಬರು ಉದ್ಗಾರ.

—ಅದೇನೇ ಇರಲಿ ಪತ್ರಿಕೆಗಳು ತುಂಬುಕ್ಕೆ ವಿಷಯ ಸಿಕ್ಕುತ್ತಲ್ಲ.

✤ ✤ ✤

ನೃತ್ಯ ಕಲೆಗೆ ಸಾಕಷ್ಟು ಉತ್ತೇಜನವಿಲ್ಲವೆಂದು ಉದ್ಗಾರ.

—ಯಾಕೆ? ನಮ್ಮೂರಿನಲ್ಲಿ ಆಗಲೇ ಎಷ್ಟೋ ಜನ ಕುಣಿಯುಕ್ಕೆ ಆರಂಭಿಸಿಲ್ಲವೇ.

✤ ✤ ✤

# ಚಿಕ್ಕಮ್ಮನ ಚಿಕಿತ್ಸಾಕ್ರಮ

ನನ್ನ ಚಿಕ್ಕಪ್ಪ ಚಿಕ್ಕಂದಿನಲ್ಲಿ ಶುದ್ಧ ಪೋಲಿಯಾಗಿದ್ದರಂತೆ. ಮೇಷ್ಟರ ಗಳಿಗೆಲ್ಲ ಚೆಳ್ಳೆಕಾಯಿ ತಿನ್ನಿಸುವುದು, ಜೊತೆ ಹುಡುಗರಿಗೆಲ್ಲ ಬಾಸುಂಡೆ ಏಳಿಸುವುದು, ಕುಂಬಳಕಾಯಿ ಸುತ್ತಿಸುವುದು, ಇದೇ ಅವರ ಹವ್ಯಾಸವಾಗಿತ್ತಂತೆ. ಮನೆ ಕೊಟ್ಟಿಗೆಯಿಂದ ಒಂದು ಕರುವನ್ನು ಸಂತೆಗೆ ತೆಗೆದುಕೊಂಡು ಹೋಗಿ ಮಾರಿ, ಆ ದುಡ್ಡಿನಿಂದ ಬೊಂಬಾಯಿ ತನಕ ಓಡಿಹೋಗಿದ್ದರಂತೆ. ಒಂಬತ್ತನೆಯ ವರ್ಷದಲ್ಲೇ!........ಚಿಕ್ಕಮ್ಮ ಬಂದ ಮೇಲೆ ಅವರ ಸಾಹಸವೆಲ್ಲ ಉಡುಗಿಹೋಗಿದೆ. ಮೂಗುದಾರ ಬಿಗಿಯದೆಯೇ ಚಿಕ್ಕಮ್ಮ ಅವರನ್ನ ಎಲ್ಲಿಗೆ ಬೇಕಾದರೂ ಎಳೆದುಕೊಂಡು ಹೋಗುತ್ತಾರೆ. ಅದಕ್ಕೆ ನಮಗೆಲ್ಲ ಚಿಕ್ಕಮ್ಮನನ್ನ ಕಂಡರೆ ಅಷ್ಟೊಂದು ಪ್ರೀತಿ. ನಮ್ಮ ಮನೆಯಲ್ಲಿ ಮದುವೆಯಾಗಿ ನಿನ್ನೆ ಮೊನ್ನೆ ಗಂಡನ ಮನೆ ಸೇರಿರುವ ಹುಡುಗಿಯರು ನನ್ನ ಹಾಗೆ ಇನ್ನೂ ಆರು ಜನ ಇದಾರೆ. ನಮ್ಮೆಲ್ಲರಿಗೂ ಚಿಕ್ಕಮ್ಮನೇ ಗುರು. ನಮ್ಮ ನಮ್ಮ ಗಂಡಾಂತರಗಳನ್ನು ನಾವು ಚಿಕ್ಕಮ್ಮನೊಂದಿಗೆ ಪ್ರತ್ಯೇಕವಾಗಿ ಗುಟ್ಟಿನಲ್ಲಿ ಹೇಳಿಕೊಳ್ಳುತ್ತೇವೆ. ಅದಕ್ಕೆಲ್ಲ ಒಳ್ಳೇ ಪ್ರತೀಕಾರಗಳನ್ನ ಚಿಕ್ಕಮ್ಮ ಹೇಳಿಕೊಡುತ್ತಾಳೆ. ಚಿಕ್ಕಮ್ಮ ಹೇಳಿಕೊಡುವ ಉಪಾಯಗಳಿಗೆಲ್ಲ ಒಂದು ಸ್ವಾರಸ್ಯವುಂಟು. ಯಾವ ಗಂಡಸಿಗೂ ಅದರ ಒಳಮರ್ಮ ತಿಳಿಯುವುದಿಲ್ಲ. "ಏನೇ! ನಿನಗೆ ನನ್ನ ಮೇಲೆ ಇಷ್ಟೊಂದು ಪ್ರೀತಿ ಇದೆಯೇನೆ!" ಎಂದು ಬಾಯಿಬಿಡುತ್ತಾ ಬೆಪ್ಪಾಗುತ್ತವೆ. ಆದರೆ, ಅವರ ಪಂಚಪ್ರಾಣಗಳು ಮಾತ್ರ ನಮ್ಮ ಪಂಜರದೊಳಗೇನೆ ಹಾರಾಡುತ್ತಾ ಇರುತ್ತವೆ. ಅಷ್ಟು ಸೊಗಸು ಚಿಕ್ಕಮ್ಮನ ಉಪಾಯಗಳು!

ಮೊನ್ನೆ ನಮ್ಮ ಚಿಕ್ಕಪ್ಪ ಯಾವುದೋ ಕಾನ್ಫರೆನ್ಸಿಗೆ ಹೋಗಬೇಕು ಅಂತ ಹಟ ಹಿಡಿದರಂತೆ. ಉರಿಬಿಸಲಿನ ಕಾಲ, ಸಿಡುಬುಗಿಡುಬು ಹರಡುತ್ತಾ ಇದೆ, ರೈಲು ಪ್ರಯಾಣ ಅಂದರೆ ಪ್ರಯಾಸ, ಖರ್ಚು ವಿಪರೀತ, ಕಾನ್ಫರೆನ್ಸು ಅಂದ್ರೆ ಬರೀ ಕೋಲಾಹಲ ಹಾಲಾಹಲ, ಬೇಡ, ಬೇಡ, ಅಂತ ನಮ್ಮಂತಹ ಹೆಣ್ಣು ಜೀವಗಳು ಒಟಗುಟ್ಟುವ ಹಾಗೆ ಚಿಕ್ಕಮ್ಮನೂ ಗುಟ್ಟಿದಳಂತೆ. ಗಂಡಸು ಬಗ್ಗಲಿಲ್ಲ. ನಿಜಸ್ಥಿತಿಯನ್ನು ಅರಿತುಕೊಳ್ಳಲಿಲ್ಲ. ಎಂದಿನಂತೆ ಹಾಗೆ ತಲೆ ತಗ್ಗಿಸಿಕೊಂಡು ಬಂಡರಿಸುವುದು ಬಿಟ್ಟು, ಎದ್ದು ನಿಂತು ಎದುರು ಮಾತಾಡಿದಂತೆ, ಹೇಳಿದಳು ಚಿಕ್ಕಮ್ಮ ಆಕೆ ಬಾಯಲ್ಲಿ ಕೇಳಬೇಕು ನೀವು ನಡೆದ ಸಂಗತಿಯ ವರದಿಯನ್ನ!" ನಾನು ಹೋಗಲೇ ಬೇಕು! ಹೋಗಿಯೇ ಹೋಗುತ್ತೇನೆ'' ಅಂದರಂತೆ, ಚಿಕ್ಕಪ್ಪ ........ಹೇಗಿದೆ!

ಇದಾದ ಅರಗಳಿಗೆಯಲ್ಲಿ ಚಿಕ್ಕಪ್ಪನಿಗೆ ಒಂದು ಶೀನು ಬಂತಂತೆ; ಒಂಟಿ ಶೀನು. ಏನೋ ಅಪಶಕುನ, ಅಂತ ಅವರೇ ಅಂದುಕೊಂಡರಂತೆ. ಚಿಕ್ಕಮ್ಮನಿಗೆ ಶೀನು ಕೇಳಿಸಿತು. ಆ ಮೇಲೆ ಕಾಲುಗಂಟೆ ಕಳೆದು, ಚಿಕ್ಕಪ್ಪ ಕೆಮ್ಮಿದರಂತೆ,

ಒಂದೇ ಒಂದು ಸಲ. ಅರ್ಧ ಗಂಟೆಯಾದ ನಂತರ, ಅವರ ಮೂಗು ಕೊಂಚ ವೊಸವೊಸವಾಯಿತಂತೆ. ಎದ್ದುಹೋಗಿ ಸಿಂಬಳ ಉಸಿರಿ ಮತ್ತೆ ಬಂದರಂತೆ.

ಬಲವಾದ ನೆಗಡಿ, ಜ್ವರ, ತಲೆಸಿಡಿತ ಇವೆಲ್ಲ ಇದ್ದರೂ, ಚಿಕ್ಕಮ್ಮ ಮೂಗು ದಾರ ಹಾಕಿ ಚಿಕ್ಕಪ್ಪನಿಗೆ ಚಂದ್ರಗ್ರಹಣ ಸ್ನಾನಮಾಡಿಸಿದಾಳೆ. ಕಾವೇರಿ ನದಿಯಲ್ಲಿ ಅದರ, ಅವತ್ತು ಅವಳು ಇಲ್ಲದ ಗಾಬರಿ ತೋರಿಸಿ, "ಅಯ್ಯೋ! ಹುಷಾರಾಗಿರ ಬೇಕು; ಅಪ್ಪ! ಊರಲ್ಲೆಲ್ಲ ಎಂಥದ್ದೋ ಜ್ವರವಂತೆ" ಎಂದು ಸುತ್ತಾಡಿ ಸುಳಿ ದಾಟಿ ಹಾಸಿಗೆ ಹಾಸಿ, ಚಿಕ್ಕಪ್ಪನನ್ನು ಮಲಗಿಸಿ, ಕಂಬಳಿ ಹೊದಿಸಿ, ನಶ್ಯದ ಡಬ್ಬಿ ತೆಗೆದು ದೂರ ಇರಿಸಿ, "ವೆಂಕಟರಮಣಾ! ಚಾಮುಂಡೇಶ್ವರೀ!" ಅಂತ ಪುಂದಾಡಿದಳಂತೆ. "ಏನೂ ಇಲ್ಲ ಕಣೆ! ನಶ್ಯ ಹಾಕಿದಾಗ ಕಣ್ಣು ಕೆಂಪಗಾಗಿ, ಮೂಗಲ್ಲಿ ಕೊಂಚ ನೀರೂರಿತು! ಅಷ್ಟೇನೆ! ಯಾಕೆ ಅವಾಂತರ ಮಾಡುತ್ತೀಯಾ? ಇಷ್ಟು ಕಂಬಳಿಯಾಕೆ? ಗಂಜಿ, ಕಷಾಯ ಏನೂ ಬೇಡ" ಅಂತ ಚಿಕ್ಕಪ್ಪ ಗೋಳಾಡುತ್ತಿದ್ದರೆ, "ನಿಮಗೇನು? ನನ್ನ ತಲೆಗೆ ತರುತ್ತೀರಿ, ಅಪ್ಪ! ಜಗದಂಬೆ!" ಅಂತ ಚಿಕ್ಕಮ್ಮ ಡಾಕ್ಟರಿಗೆ ಹೇಳಿಕಳುಹಿಸಿದಳಂತೆ.

ಡಾಕ್ಟರ್ ಹತ್ತಿರವೂ ಚಿಕ್ಕಪ್ಪ ಕುಯ್ಯೋ ಮರ್ರೋ ಅಂದರಂತೆ. ಅವರು ಕೇಳುತ್ತಾರೆಯೇ? ಎಂಥದ್ದೋ ಜ್ವರ ಅಂತ ಚಿಕ್ಕಮ್ಮ ಹೇಳಿದಳಲ್ಲಾ ಅದನ್ನೇ ಅವರೂ ಸಾಧಿಸಿದರಂತೆ. ಚಿಕ್ಕಪ್ಪ ಕೂಗಾಡುವುದನ್ನ ನಿಲ್ಲಿಸುವುದಕ್ಕಾಗಿ ಅವರು ಥಟಕ್ಕನೆ ಅವರ ಬಾಯೊಳಗೆ ಥರ್ಮಾಮೀಟರನ್ನಿಟ್ಟರಂತೆ. ರೂಂ ಬಿಟ್ಟು ಹೋಗುವವರೆಗ ತೆಗಿಯಲೇ ಇಲ್ಲವಂತೆ! ಚಿಕ್ಕಪ್ಪನಿಗೆ ವಿಪರೀತ ಕೋಪ. ಕನಲಿ ಕೆಂಡವಾಗಿ ಮುಖವೆಲ್ಲ ಕೆಂಚಗಾಗಿ ಮೈಯಲ್ಲ ಬೆಚ್ಚಗಾಯಿತಂತೆ ಥರ್ಮಾ ಮೀಟರ್ ತೆಗೆದರೆ ೧೦೪ ಡಿಗ್ರಿ, ಅಂತರಗತಪ್ರಾಣ, ನಿಸ್ತ್ರಾಣ, ಜ್ವರ!

ಚಿಕ್ಕಮ್ಮ "ಅಯ್ಯೋ!" ಅಂತ ಚೀರಿದಳಂತೆ. ಕೂಡಲೇ, ಡಾಕ್ಟರು ಆಕೆಯನ್ನ ಸಂತೈಸಿ, "ಹೆದರಬೇಡಿ, ತಾಯಿ! ಈಗ ಒಂದು ಇಂಜಕ್ಷನ್ ಕೊಡು ತ್ತೇನೆ!........ನಾಳೆ ಸಂಜೆಯೊಳಗೆ ಜ್ವರ ಇಳಿಯದೆ ಹೋದರೆ, ನಾಳಿದ್ದು ಬೆಳಿಗ್ಗೆ ದವಡೆ ಹಲ್ಲು ಎರಡು ಕೀಳುತ್ತೇನೆ........ಆಗ ಸರಿಹೋಗುತ್ತೆ.........ಇದೇನು ಮಹಾ! ಈ ಊರಿನ ಗಂಡಸರಿಗೆ ಇಂತಹ ಜ್ವರ ಈಚೀಚೆಗೆ ತುಂಬಾ ಕಡಿಮೆ ಯಾಗಿದೆ" ಅಂದರಂತೆ.

ತೆಪ್ಪಗೆ ತೊಡೆ ತೋರಿಸಿ ಇಂಜಕ್ಷನ್ ತೆಗೆದುಕೊಂಡರಂತೆ, ಚಿಕ್ಕಪ್ಪ! ಚಿಕ್ಕಮ್ಮ ಈಗಲೂ ಹೇಳಿ ಪಕ್ಕೆ ಹಿಡಿದುಕೊಂಡು ನಗುತ್ತಾಳೆ....... ಡಾಕ್ಟರು ಹೊರಟು ಹೋಗುತ್ತಲೂ, ಎದ್ದು ಚಿಕ್ಕಮ್ಮನ ಕೈಹಿಡಿದು ಪ್ರಮಾಣಮಾಡಿದರಂತೆ, "ಹಾಕಿದ ಗೆರೆ ದಾಟುವುದಿಲ್ಲ; ಹಲ್ಲು ಕೀಳಿಸಬೇಡ" ಅಂತ.

ಇಂತಹ ಗುರು ಇದ್ದ ಮೇಲೆ, ನಮ್ಮ ನಮ್ಮ ಸಂಸಾರ ಸುಖವಾಗಿ ಸಾಗು ತ್ತಿದೆಯೋ ಇಲ್ಲವೋ ಅಂತ ನೀವು ಕೇಳಬೇಕಾಗಿಯೇ ಇಲ್ಲ, ಅಲ್ಲವೆ!

—ಶ್ರೀಮತಿ ಕೇಸರಿ.

# ಪೇಪರ್‌ನಲ್ಲಿ ಸ್ವಾರಸ್ಯ














# ನಮ್ಮ ಅಪ್ಪನ ಬುದ್ಧಿಗೆ ಗ್ರಹಣ ಹಿಡಿದದ್ದು

"ಕೃಷ್ಣಾಪುರ್" ಬಡಾವಣೆಯಲ್ಲಿ ರೈಲ್ವೆ ಲೈನು ಪಕ್ಕದಲ್ಲೇ ಒಂದೇ ಪ್ಲಾನ್ ಮೇಲೆ ಕಟ್ಟಿ ಒಂದೇ ಸಮ ಕಾಣುವ ೯ ಮನೆಗಳಲ್ಲಿ ೬ನೆಯದೇ ನಮ್ಮದು. ನಮ್ಮದು ಅಂದರೆ, ತಿಂಗಳಿಗೆ ೧೬॥ ಬಾಡಿಗೆ. ಮೂರು ತಿಂಗಳು ಬಾಕಿ. ಲಾಯರ್ ನೋಟೀಸ್ ಬಂದಿದೆ. ನಮ್ಮಪ್ಪ ಇಂಥಾದ್ದರಲ್ಲೆಲ್ಲ ಬಲು ಬುದ್ಧಿವಂತ. ಆದರೆ, ನೂರಕ್ಕೆ ತೊಂಬತ್ತೈದೂ ಪೆಚ್ಚು. ಮುಟ್ಟಿದ್ದರಲ್ಲಿ ಮುಕ್ಕಾಲು ಅನಾಹುತ; ಮಾಡಿದ್ದೆಲ್ಲ ಮಹಾ ಪ್ರಳಯ, ಹೀಗೆ.

ಅಪ್ಪನ ಮೇಲೆ ದೂರು ಹೇಳುತ್ತಾನೆ, ಕೃತಘ್ನ, ಈಗಿನ ಕಾಲದ ಧಾಂಡಿಗ, ಅನ್ನ ಬೇಡಿ; ಮೊನ್ನೆ ಚಂದ್ರಗ್ರಹಣದ ದಿನ ನಡೆದದ್ದನ್ನ ಹೇಳುತ್ತೇನೆ, ಉದಾಹರಣೆಗೆ. ಆ ಮೇಲೆ ನೀವೇ ತೀರ್ಪುಕೊಡಿ.

ಪಂಚಾಂಗದಲ್ಲಿ 'ಚಂದ್ರಗ್ರಹಣ' ಅಂತ ಹಾಕಿತ್ತು; ಯಾವಾಗ ಹಿಡಿಯುತ್ತದೆ, ಯಾವಾಗ ಪೂರ್ತಿಯಾಗುತ್ತದೆ, ಯಾವಾಗ ಬಿಡಲು ಉಪಕ್ರಮಿಸುತ್ತದೆ, ಯಾವಾಗ ಸಂಪೂರ್ಣ ಮೋಕ್ಷ—ಎಂದೆಲ್ಲ ವಿವರಗಳು ಇದ್ದುವು. "ಲೋ! ಇವತ್ತು ಮನೆಯವರೆಲ್ಲ ಗ್ರಹಣ ನೋಡೇಬಿಡಬೇಕು" ಅಂದ, ಅಪ್ಪ. "ರಾತ್ರಿ ೧೨॥ಗೆ ಹಾಳು ಗ್ರಹಣ ಪ್ರಾರಂಭವಾಗೋದು!" ಅಂದೆ ನಾನು. "ಅದಕ್ಕೇನಂತೆ? ನಿಮ್ಮಗಳ ಸೌಕರ್ಯಕ್ಕೆ ಅಂತ ಸಂಜೆ ೬॥ಗೆ ಇಟ್ಟುಕೊಳ್ಳುವುದಕ್ಕಾಗುತ್ತದೆಯೇ ಇಂಥ ಬ್ರಹ್ಮಾಂಡದ ಕಾರ್ಯಕ್ರಮಗಳನ್ನ?" ಅಂದ ಅಪ್ಪ. ಮನೆ ಕಿಟಿಕಿಗಳನ್ನ ಚೆನ್ನಾಗಿ ತೆರೆದಿಟ್ಟು, ಅಲಾರಂ ಗಡಿಯಾರದಿಂದ ೧೨॥ ಎಂಬ ಸೂಚನೆ ಬರುತ್ತಲೂ ಕತ್ತು ನೀಡಿ ಒಂದು ಕಣ್ಣು ನೋಡುವುದು, ಅದಕ್ಕೇನು ಎಂದು ಅಮ್ಮ ಹೇಳಿದಳು. ಅಪ್ಪ ಅದಕ್ಕೆ ಒಪ್ಪಲಿಲ್ಲ. ಅವನದು ಹಟ ಅಂದರೆ ಹಟವೇ! ರೈಲ್ವೇ ಲೈನು ಮೇಲೆ ಹೋಗಿ ಕೂತುಬಿಡೋಣ, ಎತ್ತರವಾದ ಜಾಗ, ವಿಶಾಲವಾಗಿ ಕಾಣುತ್ತೆ, ಭೂಮಿ ಆಕಾಶ! ಉದ್ದಕ್ಕೂ ಎಲ್ಲಾನೂ ನೋಡಿಕೊಂಡು, ಮುಗಿದ ಮೇಲೆ ಮನೆಗೆ ಬರೋಣ, ಅಂದ. ಸರಿ, ಅಪ್ಪ ನೆಟ್ಟ ಆಲದಮರ. ನೇಣುಹಾಕಿಕೊಳ್ಳದೆ ವಿಧಿಯಿಲ್ಲ. ಅಮ್ಮ ಇನ್ನೂ ಏನೇನೋ ನೆಪ ತೆಗೆದಳು. "ಗ್ರಹಣದ ಸಮಯದಲ್ಲಿ ಚಂದ್ರನ ತೀರ ಹತ್ತಿರ ಹೋಗಬಾರದು, ಅಂದ್ರೆ!" ಅಂದಳು. "ಹಾಗೆಲ್ಲ ನೋಡಿದರೆ ಕಣ್ಣು ಕೋರೈಸಿಹೋಗುತ್ತೆ. ಗಾಜಿಗೆ ಮಸಿ ಹಿಡಿಸಿ, ಅದರೊಳಗಿಂದಲೇ ನೋಡತಕ್ಕದ್ದು" ಎಂದಳು. ಅಪ್ಪ ಅದಕ್ಕೂ ಆಗಲಿ ಅಂದ. ಏಳೆಂಟು ಗಾಜಿನ ಚೂರುಗಳಿಗೆ ಮಸಿ ಹಿಡಿಸಿ ಕಪ್ಪು ಮಾಡಿದೆವು.

ಎಂಟು ಗಂಟೆಗೆ ಊಟ ಮುಗಿಸಿ, ಹಾಸಿಗೆ ಹಾಸಿ, ಒಂಬತ್ತೂವರೆಗೇನೆ ಅಪ್ಪ ನಮ್ಮನ್ನ ಹೊರಡಿಸಿದ. ಹತ್ತಿರದ ರೈಲ್ವೆ ದಿಣ್ಣೆಗೆ! ಹೊಸ ಗಡಿಯಾರ, ಹಳೇ ಗಡಿಯಾರ, ದೃಕ್‌ಗಣಿತ, ವಾಕ್ಯರೀತ್ಯಾ, ನೂರಾರು ತಪ್ಪು ತಕರಾರುಗಳು ಇರುತ್ತವೆ. ಒಂದೆರಡು ಗಂಟೆ ಮುಂಚಿತವಾಗಿಯೇ ಹೋಗಿ ಕೂತುಕೊಳ್ಳುವುದೇ ವಾಸಿ, ಅಂದ. ನಾನು, ಲಚ್ಚಿ, ಕಮಲು, ನಾಗರಾಜಿ, ಅಮ್ಮ, ಪುಟ್ಟಕ್ಕ, ಅಪ್ಪ, ಇಷ್ಟು ಜನವೂ ಸಾಲಾಗಿ ಒಬ್ಬೊಬ್ಬರು ಒಂದೊಂದು ಸ್ಲೀಪರಿನ ಮೇಲೆ ಕುಳಿತೆವು. ವಿಪರೀತ ಛಳಿ, ಗಾಳಿ. "ಪಂಚಾಂಗ ಸರಿಯಾಗಿ ನೋಡಿದಿರಾ, ನೀವು? ಇವತ್ತೇ ತಾನೆ ಈ ಹಾಳು ಗ್ರಹಣ!" ಅಂದಳು ಅಮ್ಮ ಆಕಳಿಸುತ್ತಾ! "ಆಗಲೇ ಆಗಿಹೋಗಿಬಿಟ್ಟಿರಬೇಕಮ್ಮ!" ಅಂದ ನಾಗರಾಜಿ. "ಇನ್ನೂ ಎಷ್ಟು ಹೊತ್ತೇ?" ಅಂತ ಪೀಡಿಸಿದಳು ಲಚ್ಚಿ. "ಚಂದ್ರಗ್ರಹಣವೋ, ಸೂರ್ಯಗ್ರಹಣವೋ ಇವತ್ತು" ಅಂದೆ ನಾನು. ಎಲ್ಲರೂ ಕೊಂಚ ಹೊತ್ತು ಥೂ, ಛೀ, ಮಾಡಿದ ಮೇಲೆ, ಅಮ್ಮ ಮೆಲ್ಲಗೆ "ಈಗ ಗಂಟೆ ಎಷ್ಟು?" ಅಂದಳು.

ಅಪ್ಪ ಗಡಿಯಾರ ತರಲು ಮರೆತುಬಿಟ್ಟಿದ್ದ. "ಮನೆಗೆ ಹೋಗಿ ತೆಗೆದುಕೊಂಡು ಬನ್ನಿ! ನಾವಿಲ್ಲೇ ಕುಕ್ಕರುಬಡಿದಿರುತ್ತೇವೆ" ಅಂದಳು ಅಮ್ಮ, ಅಧಿಕಾರ ವಾಣಿಯಿಂದ! ಅಪ್ಪನ ಅವಸ್ಥೆ ನೋಡಿ ನಾವೆಲ್ಲ ನಕ್ಕೆವು. ದಿಣ್ಣೆಯಿಳಿದು ಅಪ್ಪ ಹೊರಟೇ ಹೋದ.

ಆಕಾಶದಲ್ಲಿ ಮೋಡಗಳು ಬಹಳ; ಮಬ್ಬು; ಮಸುಕು; ಅರೆಗತ್ತಲೆ; ಅರಿವು ಸಾಲದು. ಹತ್ತಿರದ ಮನೆಗೇ ಹೋಗಿ ಶಿವರಾಯರ ಹತ್ತಿರ ಗಡಿಯಾರ ನೋಡಿಕೊಂಡು ಬೇಗ ಬರೋಣ ಅಂತ ಅಪ್ಪ ನೆಟ್ಟಗೆ ನಡೆದ. "ಶಿವರಾಯರ ಮನೆಯಲ್ಲೇ ನೋಡಿಬರುತ್ತೇನೆ" ಅಂತ ಕೂಗಿ ಹೇಳಿದ. ಆ ಮನೆ ಮುಂದಿನ ಗೇಟ್ ತೆಗೆದು ಒಳನುಗ್ಗಿದ. 'ಶಿವರಾಯರೇ', ಅಂತ ಕೂಗಿದರು. ಒಳಗಿಂದ ಸದ್ದೇ ಇಲ್ಲ. ಹೊರಬಾಗಿಲು ಬೀಗ ಹಾಕಿತ್ತು. "ಓಹೋ! ಇವರೂ ಎಲ್ಲೋ ಗ್ರಹಣ ದರ್ಶನಕ್ಕೇ ಹೋಗಿರಬೇಕು" ಎಂದು ಅಂದುಕೊಂಡರು. ಆದರೂ, ಅಪ್ಪನ ಹಟ ಅಂದರೆ, ಹಟ ತಾನೆ? ಶಿವರಾಯರ ಮನೆ ಗಡಿಯಾರವನ್ನೇ ನೋಡಿ ಬರೋಣ ಅಂತ ಅಪ್ಪ ಉದ್ದಕ್ಕೂ ಅವರ ಮನೆ ಕಿಟಕಿಗಳನ್ನು ಒಂದೊಂದಾಗಿ ನೂಕುತ್ತಾ ಬಂದ. ಒಂದು ಕಿಟಕಿ ತೆಗೆದಿತ್ತು. ಹತ್ತಿ ಧುಮುಕಿದ ಒಳಕ್ಕೆ!

ಕತ್ತಲೆ ಏನೂ ಕಾಣಿಸದು. ಕಿಸೆಯೊಳಗೆ ಕಡ್ಡಿಪೆಟ್ಟಿಗೇನೂ ಇಲ್ಲ. ಅಪ್ಪನಿಗೆ ಹೊಗೆಯಾಡಿಸುವ ಅಭ್ಯಾಸವಿಲ್ಲ. ಮತ್ತೆ, ಕಡ್ಡಿಪೆಟ್ಟಿಗೆ ಹೇಗೆ ಬರಬೇಕು ಅಪ್ಪನ ಜೇಬಲ್ಲಿ! ಸ್ವಿಚ್ಚಿಗಾಗಿ ತಡಕಾಡಿದರು. ಎರಡು ಮೂರು ಪಟಗಳು ಕೆಳಗೆ ಬಿದ್ದು ಚೂರು ಚೂರಾದುವು. ಅಲ್ಲೇ ಅದೇ ರೂಂನಲ್ಲೇ ಟಕ್ ಟಕ್ ಟಕ್ ಅಂತ ದೊಡ್ಡ ಗಡಿಯಾರವೊಂದು ಅಪ್ಪನನ್ನ ಅಣಕಿಸುತ್ತಿತ್ತು. ನಮ್ಮ ಮನೆಗೂ,

ಶಿವರಾಯರ ಮನೆಗೂ ೨ ಸೈಕೋಪ ಗಡಿಯಾರಗಳನ್ನ ಒಟ್ಟಿಗೇ ಸಪ್ಲೈ ಮಾಡಿದ್ದ ಮಖಮಲ್ ನನ್ನೂಮಲ್ ಅಂಗಡಿಯವನು. ನೆಟ್ಟಗೆ ಆ ಶಬ್ದದ ಕಡೆ ನುಗ್ಗಿ ಅದರ ಕೆಳಗೆ ಒಂದು ಕುರ್ಚಿ ಹಾಕಿ ನಿಂತು ಕಣ್ಣರಳಿಸಿ ಉರುಳಿಸಿದಡಿ ಇದ್ದ ಅರ್ಧ ಮರ್ಧ ಬೆಳದಿಂಗಳ ಬೆಳಕಿನಲ್ಲೇ ಟೈಂ ಗೊತ್ತಾಗುತ್ತೆ ಅಂತ ಅಪ್ಪ ಸರಸರನೆ ಮುಂದಕ್ಕೆ ನಡೆದ. ಯಾವಯಾವುದೋ ಸಾಮಾನುಗಳು—ಪಿಂಗಾಣಿ, ಗಾಜು, ಕಂಚು—ಎಲ್ಲವೂ ಕೆಳಕ್ಕೆ ಬಿದ್ದು ಪುಡಿಪುಡಿಯಾದುವು. "ಈ ಶಿವರಾಯನ ಹೆಂಡತಿಯೂ ಕೂಡ ನಮ್ಮ ಮನೆ ಆಕೆಯ ಹಾಗೇನೆ! ನಟ್ಟನಡುವೆ ಟೀಪಾಯಿ ಇಟ್ಟು ಅದರ ಮೇಲೆ ಬೇಡದ ಸಾಮಾನುಗಳನ್ನು ಜೋಡಿಸುವುದು!" ಎಂದು ಅಪ್ಪ ಶಪಿಸಿದ.

ಅಷ್ಟು ಹೊತ್ತಿಗೆ ಯಾರೋ ಮುಂದಿನ ಬಾಗಿಲು ಬೇಗ ತೆಗೆದು ಒಳಗೆ ಬಂದ ಹಾಗಾಯಿತು. ಅಪ್ಪನಿಗೆ ಜಂಘಬಲ ಉಡುಗಿತು. ತಡಕಾಡಿದಾಗ ಒಂದು ಬಾಗಿಲು ಕೈಗೆ ಸಿಕ್ಕಿತು. ತಳ್ಳಿದ, ತೆರೆಯಿತು. ಒಳಗೆ ಹೋಗಿ ಹಿಂದಕ್ಕೆ ಚಿಲಕ ಹಾಕಿ ಅಲ್ಲೇ ನಿಂತ, ಕಿವಿಗೊಟ್ಟು!

ಅಪ್ಪ ಬರುತ್ತಾನೆ ಅಂತ ಅಲ್ಲಿ ನಿಂತು, ನಿಂತು ನಮಗೆ ಸಾಕಾಯಿತು. ಕಾಲುಗಂಟೆ ಕಳೆಯುತ್ತಲೂ 'ಬನ್ರೋ!' ಅಂದಳು ಅಮ್ಮ. "ಶಿವರಾಯರ ಮನೆಗೆ ಹೋಗಿ, ಅಪ್ಪನನ್ನ ಬರಹೇಳು. ಗ್ರಹಣ ಹಾಳಾಯಿತು, ಅನ್ನು!" ಅಂತ ನಾಗರಾಜಿಯನ್ನ ಕಳುಹಿಸಿದಳು. ನಮ್ಮ ಮನೆ ಬೀಗ ತೆಗೆದು ನಾವು ಒಳಗೆ ನುಗ್ಗಿ, ಸ್ವಿಚ್ ಹಾಕಿದೆವು. ಗಾಜಿನ ಚೂರುಗಳು, ಅಲ್ಲೋಲಕಲ್ಲೋಲ, ದರೋಡೆ, ಡಕಾಯಿತಿ! ಹುಡುಗರೆಲ್ಲ ಹೆದರಿ ಚೀರಿದುವು. "ಊಟಮಾಡುವ ಕೋಣೆ"ಯಿಂದ ಒಂದು ಕೆಮ್ಮು ಕೇಳಿಬಂತು. ಅಮ್ಮ ಆದಷ್ಟು ಬೇಗ ಬಾಗಿಲ ಈಚಿನ ಚಿಲುಕ ಹಾಕಿ ನಮ್ಮನ್ನೆಲ್ಲ ಕಳ್ಳನಿಂದ ಪಾರುಮಾಡಿದಳು "ಆ ಕಡೆಗೆ ಬಾಗಿಲೂ ಇಲ್ಲ ಅವನಲ್ಲೇ ಬಿದ್ದಿರಲಿ!" ಅಂದಳು. ಆ ಮೇಲೆ ನಾವು ಬಾಗಿಲೆದುರು ಮೇಜು, ಕುರ್ಚಿ, ಬೀರು ಇವುಗಳನ್ನೆಲ್ಲಾ ಪೇರಿಸಿ ಬಲಪಡಿಸಿದೆವು.

ನಾಗರಾಜಿ ಓಡಿಬಂದು, "ಅಪ್ಪ ಇಲ್ಲ. ಶಿವರಾಯರ ಮನೆಗೆ ಅವನು ಹೋಗಲೇಯಿಲ್ಲವಂತೆ" ಅಂದ. ಅಮ್ಮನಿಗೆ ಹೆದರಿಕೆಯಾಯಿತು. ಕಳ್ಳನಿಗೂ, ಅಪ್ಪನಿಗೂ ಹೊಡೆದಾಟವಾಗಿ ಅಪ್ಪ ಖೂನಿಯಾಗಿದ್ದಾನೆ. ಒಳಗಿರುವ ಘಾತಕನೇ ಅಪ್ಪನನ್ನು ಕೊಂದವನು, ಎಂದು ಅಮ್ಮ ಚೀರಿದಳು.

ಶಿವರಾಯರನ್ನೂ ಅವರ ಆಚೆ ಮನೆ ತೋಂಟದಪ್ಪನವರನ್ನೂ ಕರೆಸಿದೆವು. ಅವರು ಇನ್ನೂ ಏಳೆಂಟಾಳು ಸಹಿತವಾಗಿ ಬಂದರು. ದೊಣ್ಣೆ, ಒನಕೆ, ಹಾರೆ, ಮುಂತಾದವುಗಳನ್ನು ಹಿಡಿದು ಝಳಪಿಸುತ್ತಾ ಅವರು ಒಳಗಿದ್ದ ಕಳ್ಳನನ್ನು ಗದರಿಸಿ

ದರು ಬೀರು ಮೇಜುಗಳನ್ನು ಈಚೆಗೆಳೆದು ಚಿಲುಕವನ್ನು ಸಡಲಿಸಿ, "ಲೋ! ಬಾರೋ ಹೊರಕ್ಕೆ! ತಂಟೆಮಾಡಿದರೆ ಇಲ್ಲೇ ತೀರಿಸಿಬಿಡುತ್ತೇವೆ. ಸುಮ್ಮನೆ ಬಂದರೆ, ಬರೀ ಪೋಲೀಸಿಗೆ ಕೊಡುತ್ತೇವೆ" ಎಂದು ಕೂಗಿ ಹೇಳಿದರು.

ಒಳಗೆ ಚಿಲುಕದ ಸದ್ದಾಯಿತು. ಬಾಗಿಲು ತೆರೆಯಿತು. ಅಪ್ಪಾ.....ಬಂದ!

"ಶಿವರಾಯರೇ, ಕ್ಷಮಿಸಿ! ಗಡಿಯಾರ ನೋಡಿಕೊಂಡು ಹೋಗೋಣ ಅಂತ ನಿಮ್ಮ ಮನೆಗೆ ಕತ್ತಲಲ್ಲಿ ನುಗ್ಗಿಗೆ" ಅಂದ. "ಇದು ನನ್ನ ಮನೆಯಲ್ಲವಲ್ರಿ! ನಿಮ್ಮದೇ!" ಅಂದರು ಶಿವರಾಯರು.

"ಹಾಗೇನು? ಹಾಳು ಕಂಟ್ರಾಕ್ಟರು ಒಂದೇ ಸಮ, ಒಂದೇ ಪ್ಲಾನ್ ಮೇಲೆ ಕಟ್ಟಿದ್ದಾನೆ! ಅದಕ್ಕೇ ಬಂತು ಗ್ರಹಚಾರ" ಎಂದು ಹೇಳಿದಾಗ, ಎಲ್ಲರೂ ನಕ್ಕೆವು.

ಹೇಗಿದೆ ಅಪ್ಪನ ಬುದ್ಧಿ?

— ಶಿವುದು.

——o——

ಪೌರಸಭಾ ಚುನಾವಣೆಗಳಿಗೆ ೬೦ ಅರ್ಜಿಗಳು ಬಂದಿವೆಯಂತೆ.

—ಸದಸ್ಯರಿಗೆ ಹತ್ತು ಸೇರು ಅಕ್ಕಿ ಭತ್ಯ ಎಂದು ಹೇಳಿದ್ದರೆ, ೬೦,೦೦೦ ಅರ್ಜಿಗಳು ಬರುತ್ತಿದ್ದವು.

✤ ✤ ✤

ಬಂಗಾಳಾದಲ್ಲಿ ವಾರಕ್ಕೆ ೫೦,೦೦೦ ಜನರು ಕ್ಷಾಮ ದೇವತೆಗೆ ಬಲಿಯಾಗುತ್ತಿದ್ದಾರೆಂದು ಪಂಡಿತ ಕುಂಜ್ರುರವರ ಹೇಳಿಕೆ.

—ಇಷ್ಟು ಬಲಿಕೊಟ್ಟ ಯಜ್ಞಕರ್ತೃಗಳಿಗೆ ಸ್ವರ್ಗವು ಸಿಗದೇ ಉಂಟೇ?

✤ ✤ ✤



✤

# ನವೀನ ಗಾದೆಗಳು

(ಬಸ್ಸುಗಳನ್ನು ಕುರಿತು)

---

ಬಸ್ ಮಾಲೀಕರಿಗೆ ಬಸ್ ಅನ್ನೋಕೇ ಬರದು.

ಊರು ಸೇರುವವರೆಗೂ ನೂಕು ನೂಕೇ!

ತುಂಬೋದು ಇದ್ದಿಲು; ಉಂಬೋದು ಗ್ಯಾಸು; ಹೇಳಿಕೊಂಬೋದು ಮಾತ್ರ ಕಾರು! ಮೋಟಾರು!

ಬಸ್ನಲ್ಲಿ ಹೋದರೆ, ರೈಲು ತಪ್ಪುತ್ತೆ; ರೈಲಲ್ಲಿ ಹೋದರೆ, ಬಸ್ಸು ತಪ್ಪುತ್ತೆ.

ಅಂತು ಇಂತು, ಕುಂತಿದ್ದೇ ಲಾಭ.

ಪಾಪಿ ಬಸ್ಸಿಗೆ ಹೋದರೆ, ಪೆಟ್ರೋಲೇ ನಾಸ್ತಿ.

ದಡಬಡಾಯಿಸಿಕೊಂಡು ಬಸ್ನಲ್ಲಿ ಕೂತರೆ, ಹೊರಡುವುದಿನ್ನೂ ಎರಡು ಗಂಟೆ ತಡ!

ಹರಿಹರಕ್ಕೆ ಅಂತ ಬಸ್ನಲ್ಲಿ ಕೂತರೆ, ಅದಲ್ಲೇ ಹರಹರ ಅಂತ ಕೂತು ಕೊಂಡಿತು.

—ನಾ. ಕ.

---

# ಮೂವಿಲ್ಯಾಂಡ್ ಟಾಕೀಸ್

**ಬೆಂಗಳೂರು ಸಿಟಿ**

ಸಾರಥಿಯವರ

## ಪಂತುಲಮ್ಮ



ಇದೇ ತಾರೀಖು

**22-2-1944** ರಿಂದ

ನಡೆಯುತ್ತಿದೆ.

ಶೀಘ್ರದಲ್ಲಿಯೇ ಮೋತೀಲಾಲ್ ಟಾಕೀಸ್, ಮೈಸೂರಿನಲ್ಲಿ ಪ್ರದರ್ಶಿಸಲ್ಪಡುತ್ತೆ.

---

ವಿವರಗಳಿಗೆ—

ಚಂದ್ರ ಫಿಲ್ಮ್ಸ್ ಲಿಮಿಟೆಡ್

**ಗಾಂಧಿನಗರ, ಬೆಂಗಳೂರು**

— ಇವರಿಗೆ ಬರೆಯಿರಿ

# ಅನರ್ಥಕೋಶ

---

ಈಗಲೇ—ಗುಮಾಸ್ತೆಯ ಭಾಷೆಯಲ್ಲಿ ಇದಕ್ಕೆ, "ಮೂರು ತಿಂಗಳನಂತರ" ಎಂಬ ಅರ್ಥವಿದೆ.

ಈಚಲು—ಖಜಾನೆಯ ಮೂಲಸ್ತಂಭ; ಅಶ್ಲೀಲ ಸಾಹಿತ್ಯದ ಅಧಿದೇವತೆ.

ಈತನು—ಈ ದೇಹ; ಇವ.

ಈ.ಪಿ.ಎಸ್.—ಎಲ್ಲ ರೀತಿಯ ಸಾರ್ವಜನಿಕ ಬಿಟ್ಟಿ ಚಾಕರಿಗಳಿಗೂ ಯೋಗ್ಯ ಎಂದು ಹನ್ನೊಂದು ವರ್ಷ ವಿದ್ಯಾಭ್ಯಾಸದನಂತರ ಸರ್ಕಾರದವರು ಕೊಡುವ ಬಿರುದು.

ಈರ—ಈರಿ ಎಂಬ ಸ್ತ್ರೀಲಿಂಗದ ಪುಲ್ಲಿಂಗ. (ಮಾರಾ ಎಂಬುದನ್ನೂ ನೋಡಿ.)

ಈಶ—ಅವನಿಗೆ ಈಶನಾದರೆ ನಮಗೆ........(ಅ....... ನೋಡಿ).

ಉಘೇ—ಪ್ರಾಚೀನ ಕನ್ನಡಿಗರ ಜೈಕಾರ. ಈಗ ನಾವು 'ಕನ್ನಡ ಮಾತಾ ಕೀ ಜೈ', ಅಂತೇವೆ.

ಉತ್ತಮರು—ಇವರಿಗೆ ಮಾತ್ರ ಕೆಲವೆಡೆಗಳಲ್ಲಿ ಕ್ಷೌರ ನಡೆಯುತ್ತದೆ.

ಉಪ್ಪಿಟ್ಟು—ಒಂದು ಬಗೆಯ ಜೀವನಾಧಾರ.

ಉಸ್ಸಪ್ಪ—ಸುಸ್ತಾದಾಗ ನಾವು ಶರಣುಹೋಗುವ ನೆಂಟರಿವರೇ!

ಉಂಗುರ—ಬೆರಳು ತೋರಿಸಿದರೆ, ಕೆಲವರು ಇದನ್ನು ಹಾಕಿಬಿಟ್ಟಾರು.

ಉಂಗುಷ್ಠ—ನೆಲಕೆರೆಯಲು ಕೋಮಲಾಂಗಿಯರು ಉಪಯೋಗಿಸುವ ಸಾಧನ.

ಉಂಡೆ—(ಪಿಂಡ ಎಂಬುದನ್ನು ನೋಡಿ)

ಉಂಡುಂಡು—ಡಿಟೋಗಳನ್ನು ಭಕ್ಷಿಸಿ........

—ಖಾರಾಂತ.

—o—

# ಬರಹಗಾರರಿಗೆ ಸಲಹೆಗಾರರು

"ಉದಯವಾಗಲಿ ಚೆಲುವ ಕನ್ನಡನಾಡು" ಎಂಬ ಪದ ಪಂಕ್ತಿಯನ್ನು "ಉದಯವಾಗಿದೆ ಚೆಲುವ ಕನ್ನಡನಾಡು" ಎಂದು ಮಾರ್ಪಡಿಸಲು ಜನಮನಕ್ಕೆ ಧೈರ್ಯವನ್ನೊದಗಿಸಿದ ಲೇಖಕರೊಬ್ಬರು ನಮ್ಮ ಪತ್ರಿಕೆಯ ಮೂಲಕ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಮುದುರಿ ಕುಳಿತಿರುವ ತರುಣ ಲೇಖಕರಿಗೆ ಸೂಕ್ತ ಸಲಹೆಗಳನ್ನಿತ್ತು, ಸಾಹಿತ್ಯೋದ್ಧಾರ ಮಾಡಬೇಕೆಂಬ ದೀಕ್ಷೆಯನ್ನು ವಹಿಸಿದ್ದಾರೆ. ಈಗಾಗಲೇ ಅವರಿಗೆ ಪತ್ರ ಬರೆದ ಹಲವು ತರುಣರಿಗೆ ಕೇಳಕಂಡಂತೆ ಅವರು ಸಲಹೆಗಳನ್ನು ದಯಪಾಲಿಸಿದಾರೆ. ಅವರಿಗೆ ಹೃದಯ ರೋಗವಿರುವುದರಿಂದ ಯಾರೂ ಅವರ ವಿಳಾಸಕ್ಕೆ ಭಯೋತ್ಪಾದಕ ಪತ್ರಗಳನ್ನು ಕಳುಹಿಸ ಕೂಡದೆಂದು ಬೇಡಿಕೊಳ್ಳುತ್ತೇವೆ ಅವರ ಮಾತಿಗೆ ನೀವು ಎಷ್ಟು ಆಕ್ರೋಶಗೊಂಡರೂ ದಯವಿಟ್ಟು ತಾಳ್ಮೆಯಿಂದ ವರ್ತಿಸಬೇಕಾಗಿ ಕೋರುತ್ತೇವೆ.

ಭಟ್ಟಾರಕ—ನಿಮ್ಮ "ಅನ್ನ-ಸಾರು" ಚೆನ್ನಾಗಿದೆ. ಈಗಿನ ಬರ-ಹ-ಗಾಲದಲ್ಲಿ ಇಷ್ಟು ರುಚಿಯಾಗಿ ಅಡಿಗೆ ಮಾಡಿದ್ದಕ್ಕೆ ಅಭಿನಂದನೆಗಳು. ಇನ್ನು ಪರವಾಗಿಲ್ಲ. "ಕುರುಡು ಮೂಗರ ಪಾಠಶಾಲಾ ಪತ್ರಿಕೆ"ಗೂ ನೀವು ನಿಮ್ಮ ಲೇಖನಗಳನ್ನು ಕಳುಹಿಸಬಹುದು. ಶ್ರೀವರ್ಮ.........ರ ಗ್ರಂಥಗಳನ್ನು ಮಾತ್ರ ಓದಬೇಡಿ. "ಅಂತಃಪುರ, ವಿಟವಿನೋದ" ಮುಂತಾದ ಮಾಸ ಪತ್ರಿಕೆಗಳಲ್ಲಿ ತಮ್ಮ ಲೇಖನಗಳು ಪ್ರಕಟವಾಗಬೇಕು ಎಂದಿರುವವರು ಮಾತ್ರ ಅವುಗಳನ್ನು ಓದತಕ್ಕದ್ದಾಗಿದೆ.

ಚೂರಿ—ಸ್ವಾಮಿ! ಬಡವನ ಮೇಲೆ ಕೃಪೆ ಇಟ್ಟು ತಮ್ಮ ಪತ್ರವ್ಯವಹಾರವನ್ನು ನಿಲ್ಲಿಸಬೇಕು. ನಿಮ್ಮ ಹತ್ತನೆಯ ಮಹಾ ಕಾವ್ಯವನ್ನು ನಾನು ಇಂದಿನ ಗೂಡ್ಸ್ ಗಾಡಿ ಮೂಲಕ ತಮಗೆ ರವಾನಿಸಿದೇನೆ. ತಮ್ಮ ಮಹೋಪಮೆಗಳನ್ನು ತಿಳಿದುಕೊಳ್ಳುವ ಪ್ರಯತ್ನದಲ್ಲಿ ನನಗೆ ಮೆನಿಂಜೈಟಿಸ್ ಬರುವ ಸಂಭವವಿದೆ ಎಂದೂ, ತಮಗಾಗಲೇ ಎಂಜೆಲೈಟಿಸ್ ಬಂದಿದೆ ಎಂದೂ, ಇಲ್ಲಿನ ಡಾಕ್ಟರ್ ಅಭಿಪ್ರಾಯಪಡುತ್ತಾರೆ. ಹುಷಾರಾದಾಗ ಕಾಗದ ಬರೆಯಿರಿ.

ಪಂಜರ ಶುಕಿ—"ಗಂಡುದೇವರ ಮುಂದೆ, ಭಂಡ ದೇವನು ಏಕೆ?" ಎಂಬ ನಿಮ್ಮ ಖಂಡ ಪದ್ಯ ಮಹಿಳಾ ಸಮಾಜಗಳಲ್ಲಿ ಅಲ್ಲೋಲ ಕಲ್ಲೋಲಗಳನ್ನುಂಟು ಮಾಡುವುದರಲ್ಲಿ ಸಂದೇಹವೇ ಇಲ್ಲ. ಆ ಪದ್ಯಕ್ಕೆ ನೀವು ಮತ್ತೊಂದು ಪಂಕ್ತಿಯನ್ನಾದರೂ ಸೇರಿಸಲೇಬೇಕು "ಮಿಂಡ" ಮುಂತಾದ ವರ್ಜ್ಯ ಪದಗಳಲ್ಲದೆ, ಸಭ್ಯ ಪ್ರಾಸಗಳು ಸಿಗುವುದು ಕಷ್ಟ ಎಂದು ನೀವು ಹೇಳರುವುದು ಸರಿಯಾದರೂ, ಪ್ರಯತ್ನಮಾಡಿ.

ಲಘುದತ್ತ—ತುಂಬಾ ಸಂತೋಷ. ಕವಿತೆ ಅಂದರೆ ಹಾಗೆ ಹೆಂದು ಬರಬೇಕು ನಮ್ಮ ದೇಶದಲ್ಲಿ! ನಿರರ್ಗಳವಾಗಿ ಅನಾಯಾಸವಾಗಿ ತೈಲಧಾರೆಯಂತೆ, ಸೋನೆ ಹಿಡಿದಂತೆ. ಅಧೈರ್ಯ ಪಡಬೇಡಿ, ಹರಿಯಬಿಡಿ. ಇದು ರೋಗದ ಚಿಹ್ನೆ ಎಂದು ಹೇಳುವವರ ಮಾತಿಗೆ ಕಿವಿಗೊಡಬೇಡಿ. ಆದರೆ, ನಿಮಗೆ ನನ್ನದೊಂದು ಸಲಹೆ. ಮೂರು ಮೂರು ಪಂಕ್ತಿಗಳನ್ನು ಒಟ್ಟು ಸೇರಿಸಿ, ಪ್ರತಿ ಪಂಕ್ತಿಯ ಕಡೆಯ ಮಾತನ್ನು ಕತ್ತರಿಸಿ ಎಸೆದು, ಹೊಸ ಪಂಕ್ತಿಗಳನ್ನು ರಚಿಸಿ. ಉದಾಹರಣೆಗೆ:

| | |
|---|---|
| ನಾ ನವಿಲಾಗಿ | ನೀ ಮಿಗಿಲಾಗಿ |
| ಕಾಮನ ಬಿಲ್ಲಾಗಿ | ಕಾಮನ ಮುಗಿಲಾಗಿ |
| ರಾಮನ ಬಾಣಾಗಿ. | ರಾವಣ ತಲೆತಾಗಿ. |

ಬಾ ಹನುಮನೆ
ತಾರನೆ ಸಂಜೀವಿ
ತೋರನೆ ಬಾಲವ.

ನನ್ನ ಸಲಹೆಯಂತೆ, ಹೀಗೆ ಮಾಡಿ—

ನಾ ನವಿಲಾಗಿ ಕಾಮನ ಬಿಲ್ಲಾಗಿ—ರಾಮನ,
ನೀ ಮಿಗಿಲಾಗಿ ಕಾಮನ ಮುಗಿಲಾಗಿ—ರಾವಣ,
ಬಾ, ಹನುಮನೆ ತಾರನೆ ಸಂಜೀವಿ—ತೋರನೆ?

ಹೊಸ ನಮೂನೆ! ಕ್ಲಿಷ್ಟತೆ ಕಡಿಮೆ! ಭಾವದ ನವೀನತೆ! ಮೃದು ಹಾಸ! ........"ಕಣ್ಣಾರಿಯದು, ಕರುಳರಿಯದೇ?" ಕಿವಿಚುಕೊಳ್ಳಲಿ.

ಆಹಂತ ಕಂತ—ನಿಮ್ಮ ಕಥನ ಕುಶಲತೆ ನಿಜವಾಗಿಯೂ ಮೆಚ್ಚತಕ್ಕದ್ದೇ! ಅಹಾ! ಭೀಮುಕ್ಕ ಆ ಕಾವಲಿ ಮೇಲಿಂದ ದೋಸೆಯನ್ನು ಮಗುಚಿ ತೆಗೆಯುವ ವಿವರಣೆಯನ್ನೋದುತ್ತಾ ಕುಳಿತರೆ, ನಾಲಿಗೆಯಲ್ಲಿ ನೀರೂರದಿರುವುದೇ ಆಶ್ಚರ್ಯ!...... ಆದರೂ, ಹುಷಾರಿ! ಪರಮ ಹುಷಾರಿ! ಕೆಟ್ಟುಹೋದ ಮುನಿಸಿಪಲ್ ನಲ್ಲಿಯಂತೆ ನಿಮ್ಮ ಲೇಖಣಿಯ ತುದಿಯಿಂದ ನೀರು ನೀರಾಗಿ ಸಾಹಿತ್ಯ ಸೋರುತ್ತಿದೆ.

ದ. ಪಾ. ಶ್ರೀ—"ಪ್ರೇಮ ಪತಾಕೆ" ಯಿಂದ ನಿಮ್ಮ ಮಾನ ಉಳಿಯುವ ಹಾಗಿಲ್ಲ. ಅದನ್ನು ನೀವು ತಿಪ್ಪೆಗೊಂಡನಹಳ್ಳಿ ಸರೋವರದಲ್ಲಿ (ಬೇಡ! ಅಲ್ಲಿಂದಲೇ ಅಲ್ಲವೇ ಬೆಂಗಳೂರಿಗೆ ನೀರು ಸರಬರಾಯಿ ಆಗುವುದು? ಬೇರೆ ಯಾವುದಾದರೂ ಆಳವಾದ ಕೆರೆ ಹುಡುಕಿ!) ಮುಳುಗಿಸುವುದೇ ಕ್ಷೇಮ. "ಪಂಪ ರನ್ನಾದಿಗಳೂ ಕೂಡ ಮೊದಮೊದಲು ಇಂತಹ ಕೃತಿಗಳನ್ನು ರಚಿಸಿರಬಹು

ದಲ್ಲವೆ?" ಎಂದು ನೀವು ಕೇಳುತ್ತೀರಿ. ಸಂಪಟರನ್ನ ಕೃತವಾದ ಕಾವ್ಯದಂತೆ ನೀವೂ ಒಂದನ್ನು ಬರೆದಾಗ, ನಾನು ಆ ಪ್ರಶ್ನೆಗೆ 'ಬಹುದು' ಎಂಬ ಉತ್ತರ ವನ್ನು ಕೊಡಬಲ್ಲೆ:

ಶಾಮಿ—ನಿಮ್ಮ ಶೈಲಿಯಲ್ಲಿ ಸಹಜತೆ ಕಡಿಮೆ. "ರಾಮಣ್ಣ ರೊಯ್ಯನೆ ರೋಧನೆ ಮಾಡಿದ, ಸಾಂಬು ಪಿಷ್ಪೋ ಎಂದು ಕಿರಿಚಿದ" ಎಂದು ಬರೆದಿರುವಿರಿ. ನಾನು ಮೊನ್ನೆ ಸ್ನಾನದ ಮನೆಯಲ್ಲಿ ಅವೆರಡನ್ನೂ ಅಭ್ಯಾಸಮಾಡಿದೆ. "ಪಿಷ್ಪೋ, ಪಿಷ್ಪೋ" ಎಂದು ಕಿರಿಚಿದೆ. ನನ್ನ ಮನೆಯಾಕೆ ಹೊರ ಬಾಗಿಲಿಗೆ ಬೀಗ ಹಾಕಿ ನೆರೆಮನೆಯವರೊಂದಿಗೆ ಡಾಕ್ಟರ್ ಮನೆಗೆ ಹೊರಟು ಹೋದಳು. ಸಹಜವಾಗಿ ರೋದನಮಾಡುವುದನ್ನು ಕಲಿಯಿರಿ! "ಪಿಷ್ಪೋ" ಎಂದು ಮನುಷ್ಯ ಪ್ರಾಣಿ ಕಿರಿಚುತ್ತದೆಯೇ? ಎಲ್ಲಿ? ಯಾವಾಗ? ಯಾರು? ಏತಕ್ಕೆ?

ಅರಾವತೀ—ನಿಮ್ಮ ಕವನಗಳಿಗೆ ಈಗ ದಿನ ಪತ್ರಿಕೆಗಳಲ್ಲೂ ಕೂಡ ಅವಕಾಶ ದೊರೆಯಲಾರದು. ಆದರೂ, ಹೇ! ಕಾವ್ಯ ರಮಣನ ಕೈಗೊಂಬೆ!" ನುಡಿಸಿದುದನು ನುಡಿಯುವುದೇ ಕಲಾವಿದನ ಧರ್ಮ. ನಿಮ್ಮೂರಿನ "ಅಶಕ್ತ ಪೋಷಕ ಸಭೆ"ಯಲ್ಲೂ, "ಅನಾಥ ಶಿಶು ಸಂರಕ್ಷಣಾಲಯ" ದಲ್ಲೂ ನಿಮ್ಮ ಕವನಗಳನ್ನೋದಿ ಅರ್ಥ ಹೇಳಿ. ನಿಮ್ಮ ಕಾವ್ಯಪ್ರಚಾರ ಅಲ್ಲೇ ಮೊದಲು ಗರಿಗೂಡಲಿ. ಶುಭಮಸ್ತು. ಆ ಸಂಸ್ಥೆಗಳಿಗೆ ಮೊದಲೇ ತಿಳಿಸಿ.

ಭೀಮು—ನಿಮ್ಮ ಕಾದಂಬರಿಯಲ್ಲಿ ಪುಟ ಪುಟಕ್ಕೂ ಗಂಡಾಂತರಗಳೇ ತುಂಬಿವೆ. "ಪುನರಪಿ ಗಂಡಂ, ಪುನರಪಿ ಮುಂಡಂ" ಚಲನ ಚಿತ್ರಗಳನ್ನು ಅಷ್ಟು ಕಠೋರವಾಗಿ (ಪು. ೩೩೨) ಟೀಕಿಸಿರುವ ನೀವು ಅದೇ ಹಳ್ಳಕ್ಕೆ ಬಿದ್ದಿರುವಿ ರಲ್ಲಾ! ಶೋಚನೀಯ! ಕಾರ್ಬಾಲಿಕ್ ತೆಗೆದುಕೊಂಡು ಕೈ ತೊಳೆಯಿರಿ.

ಭೀರು—ನಿಮ್ಮ ಮೂರು ಕಥೆಗಳನ್ನೂ ನಾನು ನಾಲ್ಕಾರು ಸಾರಿ ಓದಿ, ಜನರೆದುರು ಹೊರಗೆಡಹಲು ಯೋಗ್ಯವಾಗುವಂತೆ ತಿದ್ದಿ ಸರಿಪಡಿಸಿದೆ. ಆದರೆ, ಅಷ್ಟು ಕೆಲಸಮಾಡಿ, ಮುಗಿಸಿದ ಮೇಲೆ, ಅವು ನಿಮ್ಮದಲ್ಲ, "ಶಾಸ್ತ್ರಿ" ಅವರದು ಅಂತ ತಿಳಿದು ಬಂತು! ಹೀಗೆ ಮೋಸಕ್ಕೆ ಕೈ ಹಚ್ಚಬಹುದೇ?........ನಿಮ್ಮ ವಿಳಾಸವನ್ನು ನಾನು ಶಾಸ್ತ್ರಿ ಅವರಿಗೆ ಕಳುಹಿಸುತ್ತೇನೆ. ಅವರೇ ತಕ್ಕ ಶಾಸ್ತಿ ಮಾಡಲಿ. ಮೂರು ತಿಂಗಳು ಎಲ್ಲಿಗಾದರೂ ಪ್ರವಾಸ ಹೊರಡಿ.

—ಬಾಕಾಳಿ.

———o———



ಇವನ್ನ ಶರೀರಿ ಅಂದ್ರೆ. ಅಡಿಗೆಮಾಡುಕ್ಕೆ ಹೋಗ್ಬೇಕು ಬಿಡುಲ್ಲ.

ಅವಳಿಗೆ ಯಾಕೇ ಹೇಳಿದೆ ಅಡಿಗ್ಗೆ ಹೋಗುತ್ತೇನೆ ಅಂತ ಅದಕ್ಕೆ ಅವನು ಬಿಡುಲ್ಲ.

---

ಸುಪ್ರಸಿದ್ಧ ಹಾಸ್ಯಗಾರನೊಬ್ಬನನ್ನು ಮದ್ರಾಸ್ ಸರ್ಕಾರದವರು ಅಬ್ಕಾರಿ ಅಧಿಕಾರಿಯನ್ನಾಗಿ ನೇಮಿಸಿದ್ದಾರಂತೆ.

—ಆದರೇನು ಅಬ್ಕಾರೀ ಏನು ತಮಾಷೆ ಅಲ್ಲ!

* * *

ಪ್ರಸಿದ್ಧ ಚಲನ ಚಿತ್ರದಲ್ಲಿ ಗವಾಯಿಯು ಒಂದು ಕಿವಿ ಮುಚ್ಚಿಕೊಂಡು ಹಾಡುತ್ತಾನಂತೆ.

—ಅವನ ಸಂಗೀತ ಅವನಿಗೇ ಬೇಜಾರೇ?

* * *

# ಕನಸ್ಶಾಸ್ತ್ರ

ಕನಸುಗಳನ್ನು ಅಲ್ಲಗಳೆಯಬಾರದು. ಅವುಗಳಿಗರ್ಥವಿದೆ. ಅವುಗಳಿಂದ ನರ್ಥವಿದೆ. ಅವು ನಮ್ಮ ಅಂತರಂಗದ ಒಳಬಾವಿಯ ಪಾತಾಳಗರಂಡಿಗಳು. ಸುಪ್ತಚೇತನವೆಂಬ ಸೂತ್ರಧಾರನು ರಚಿಸಿ ನಡೆಸುವ ನಾಟಕಗಳವು. ನಮ್ಮ ಆಸೆಗಳೆಲ್ಲವೂ ಪೂರ್ಣವಾಗುವುದು ಕನಸುಗಳ ಮೂಲಕ. ಕನಸು ನೆನಸಾಗುವುದು ಹಾಗಿರಲಿ, ನೆನಸು ಕನಸಾಗುವುದು ಕನಸಿನಲ್ಲಿ! ಇದೀಗ ಸೋಜಿಗ! ಕನಸ್ಶಾಸ್ತ್ರದ ಸ್ವಾರಸ್ಯವೇ ಅದು. ಆಧುನಿಕ ಹದಿನಾರಾಣೆ ಅಮೇರಿಕ ಪ್ರೊಫೆಸರುಗಳ ಅಭಿಮತವಿದು! ಗೊಡ್ಡು ಗೋವರ್ಧನದರದಲ್ಲ! ನಾವು ಸುಖನಿದ್ರೆ ಪಡೆದು ಸುಷುಪ್ತಿಯಲ್ಲಿ ಮುಳುಗಬೇಕಾದರೆ, ಕದಡಿದ ನಮ್ಮ ಅಂತಃಕರಣ ಕನಸುಕಂಡು ತಿಳಿಯಾಗಬೇಕು. ನಮ್ಮ ಒಳ ಹುಣ್ಣುಗಳೆಲ್ಲ ವಾಸಿಯಾಗುವುದು ಕನಸಿನ ಮುಲಾಮಿನ ಮೂಲಕವೇ!

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಾದಿ ಅರಿಷಡ್ವರ್ಗಗಳನ್ನು ಜಾಗ್ರದಾವಸ್ಥೆಯಿಂದ ನಾವು ಸ್ವಪ್ನಾವಸ್ಥೆಗೆ ತಳ್ಳಬಹುದು. ಆದರೆ, ಅಲ್ಲಿ ಅವು ತಮ್ಮ ಪ್ರಭಾವವನ್ನು ಬೀರಿಯೇ ಬೀರುವುವು. ಉದಾಹರಣೆಗೆ:

ಕಾಮ—ಸಕಲ ವಿಧವಾದ ಆಶೆಗಳಿಗೂ ಕನಸಿನ ಲೋಕದಲ್ಲಿ ತಡೆಯಿಲ್ಲ. ಅಲ್ಲಿ ನಿದ್ರಿಸುವವನೇ ಇಂದ್ರ; ಅವನ ಸುತ್ತ ಅಪ್ಸರೆಯರು, ಗಂಧರ್ವರು, ಕಿನ್ನರರು, ಕಿಂಪುರುಷರು, ಕಿಂಸ್ತ್ರೀಯರು ......ಅಂತರಂಗಕ್ಕೆ ನಾಚಿಕೆಯನ್ನು ತರುವ ಕಾಮ್ಯವಸ್ತುವಾದರೆ, ಕನಸಿನರಾಣಿ ಅದಕ್ಕೆ ಸುಂದರವಾದ ಹೊದಿಕೆಯನ್ನಿತ್ತು, ವೇಷ ಮರೆಸಿ ಕರೆತರುತ್ತಾಳೆ. ಕನಸು ಸಂಕೇತಗಳ ಸಂತೆ! ಹಾವು, ಚೇಳು, ಹೊಳೆ, ಪಾಶಾಂಕುಶ, ಗದೆ, ಗುಂಡು, ಬಾಗಿಲು, ಬೆಟ್ಟ, ಪಾತ್ರೆ, ಜಾತ್ರೆ ಎಲ್ಲವೂ ಸಂಕೇತಗಳು. ಆಂತರಿಕ ತೃಪ್ತಿಯನ್ನುಂಟು ಮಾಡಿ ವ್ಯಕ್ತಿಯನ್ನು ಸಂತೈಸುವ ಸಾಮಗ್ರಿಗಳು.

ಕ್ರೋಧ—ಜಾಗ್ರದಾವಸ್ಥೆಯಲ್ಲಿ ತೀರಿಸಲಾರದ ತೀರಿಸಲಾಗದ ಕೋಪವನ್ನು ನಾವು ಕನಸಿನಲ್ಲಿ ತೀರಿಸುತ್ತೇವೆ. ಬಲವಂತದಿಂದ ನಮಗೆ ಅವಮಾನವಾದರೆ "ತಾಳು! ಮಲಗಿದ ಮೇಲಾಗಲಿ" ಎಂದು ನಮ್ಮ ಅಂತರಂಗ ನಮಗೆ ಧೈರ್ಯ ಕೊಡುತ್ತದೆ. ಮಲಗಿ ಕನಸು ಕಂಡಾಗ ನಾವು ನಮ್ಮ ಶತ್ರುಗಳನ್ನು ಪ್ರತ್ಯಕ್ಷವಾಗಿಯಾಗಲಿ, ಶಿಕ್ಷಿಸುತ್ತೇವೆ. ಪರೋಕ್ಷ ಅಂದರೆ, ಹೀಗೆ: ಹಯಗ್ರೀವಾಚಾರ್ ಎಂಬುವರು ನಮ್ಮ ಶತ್ರುವಾದರೆ, ಕನಸಿನಲ್ಲಿ ನಾವು ಜಟಕಾ ಹೊಡೆಯುತ್ತೇವೆ; ಹನುಮಂತಯ್ಯನವರಾದರೆ, ಕಪಿಗಳಿಗೆ ಕಲ್ಲು ಬೀರುತ್ತೇವೆ; ಹುಲಿರಾಯರಾದರೆ, ಶಿಕಾರಿಪುರದಲ್ಲಿ ನಾವು ಅವರನ್ನು

ಭೆಟ್ಟಿಯಾಗುತ್ತೇವೆ; ವಿನಾಯಕರಾಯರಾದರೆ, ನಾವು ಗಣೇಶ ಪೂಜೆಮಾಡಿ ಮಣ್ಣಿನ ವಿಗ್ರಹವನ್ನು ಕೆರೆಯಲ್ಲಿ ಬಿಡುತ್ತೇವೆ; ಕಾವೇರಿಬಾಯಾದರೆ ನಾವು ಕನ್ನಂಬಾಡಿ ಕಟ್ಟುತ್ತೇವೆ ಇತ್ಯಾದಿ.

ಲೋಭ—ಕನಸಿನ ಪ್ರಪಂಚದಲ್ಲಿ ಅರಶಿನ ಬಣ್ಣದ್ದೆಲ್ಲ ಚಿನ್ನದ ಪ್ರತಿನಿಧಿ; ಬೆಳ್ಳಗಿರುವುದೆಲ್ಲ ಬೆಳ್ಳಿ; ಮೇಷ್ಟರುಗಳು ಕೊಡುವ "ನೋಟ್ಸು"ಗಳೆಲ್ಲ ಕರೆನ್ಸಿ ನೋಟುಗಳು!......ನೂರಾರು ಕಡೆಗಳಿಂದ ನಮ್ಮ ರೂಮಿಗೆ ನೋಟ್ಟುಗಳು ಬಂದು ಬೀಳುತ್ತವೆ ಎಂಬ ಕನಸನ್ನು ನೀವು ಕಂಡರೆ, ಅದು ನಿಮ್ಮ ಹಣದಾಸೆಯ ಗುರುತು, ಅದನ್ನು ನಿಮ್ಮ ಅಂತರಂಗವು ಪೂರ್ಣಮಾಡುವ ವಿಧಾನ ಎಂದು ತಿಳಿಯಿರಿ. ಕನಸಿನಲ್ಲಿ ಬೆಟ್ಟ ಹತ್ತುವುದು, ಮೆಟ್ಟಿಲು ಹತ್ತುವುದು, ಒಬ್ಬರ ತಲೆ ಮೇಲೆ ನಿಲ್ಲುವುದು, ಗರುಡವಾಹನ, ಗಾಳಿಯಲ್ಲಿ ತೇಲಾಡುವುದು,—ಇವೆಲ್ಲವೂ ನಿಮ್ಮ ಗ್ರೇಡನಾಸೆ, ಭಡ್ತಿಯಾಸೆ, ಭತ್ಯದಾಸೆಯನ್ನು ತೋರಿಸುತ್ತದೆ. ಕನಸಿನಲ್ಲಿ ನಿಮ್ಮ ಬಾಯಿಗೆ ನೀವು ಅಕ್ಕಿಕಾಳನ್ನು ಹಾಕಿಸಿಕೊಂಡರೆ, ಅದು ನಿಮ್ಮ ರೇಷನ್‌ಕಾರ್ಡನ್ನು ಬದಲಾಯಿಸಬೇಕೆಂಬ ಹಂಬಲದಿಂದಾದ ಕನಸೆಂದು ತಿಳಿಯಿರಿ.

ಮೋಹ—ಸತಿ ಮೋಹ, ಸುತ ಮೋಹ ಇತ್ಯಾದಿಗಳೆಲ್ಲವೂ ಕನಸಿನಲ್ಲೇ ನಮ್ಮನ್ನು ಸಂತೃಪ್ತಿಗೊಳಿಸುವುದು. "ಆಕಿ ಒಂದು ಒಳ್ಳೆ ಮಾತು ಆಡುವುದಿಲ್ಲವಲ್ಲಾ!" "ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ ಏನೊಂದು ನಗಿ ಇತ್ತು!" ಎಂಬ ಕೊರಗಿಗೆ ಕನಸೇ ಮದ್ದು. ಆಕೆ ದಿನವೆಲ್ಲ ಬೈದು ಕಾಡಿದರೂ, ಕನಸಿನಲ್ಲಿ ಆಕೆ ಮೇಲಿನ ಮೋಹ ನಮಗೆ ಸುಂದರವಾದ ಸನ್ನಿವೇಶಗಳನ್ನು ರಚಿಸಿ ಕೊಡುತ್ತದೆ. "ಇಕೊಳ್ಳಿ! ಈ ಹತ್ತು ರೂಪಾಯಿ!" ಎಂದು ಕನಸಿನಲ್ಲಿ ಆಕೆಯೇ ತಂದು ಕೊಡುವಳು "ನಾನು ಮಾಡಿದ್ದು ತಪ್ಪಾಯ್ತು ಅಂದ್ರ!" ಎಂದು ಕನಸಿನಲ್ಲಿ ಕಾಲಿಗೆ ಬೀಳುವಳು. "ಹೋಟಲಿಗೆ ಹೋಗಬನ್ನಿ, ಇನ್ನೊಂದು ಸಿಗರೇಟು ಸೇದಿ" ಎಂದು ಅಂಗಲಾಚುವಳು. ಹಾಗೆಯೇ, ಮಗನಿಂದ ಮನಿಯಾರ್ಡರುಗಳೂ ಧಾರಾಧಾರೆಯಾಗಿ ಬರುತ್ತವೆ, ಕನಸಿನಲ್ಲಿ. "ಅಪ್ಪಾ! ನೀನು ದುಡಿಯಬೇಡವು! ನೀನು ಪೆನ್ಶನ್ ತಕೊ! ನಾವಿಲ್ಲವೆ ಇನ್ನು? ನೀನು ಏಕಾದಶಿ, ಗುರುವಾರ, ಶನಿವಾರ, ಹೀಗೆ ಉಪವಾಸ ಮಾಡುತ್ತಾ ಬಾ" ಎಂದು ಹಿರೀ ಮಗನು ಸಂತೈಸುತ್ತಾನೆ, ಕನಸಿನಲ್ಲಿ

ಮದ—ಕನಸಿನ ಪ್ರಪಂಚವೇ ಮದ ಭೂಮಿ! ಅಲ್ಲಿ ನಾವೇ ನಿರಂಕುಶ ಪ್ರಭುಗಳು. ಪ್ರತಿಯೊಂದು ಕನಸಿನಲ್ಲೂ ನಾವೇ ನಾಯಕರು. ಅಲ್ಲಿ ಪ್ರತಿನಾಯಕರೇ ಇಲ್ಲ. ಗಲ್ಲಿಗೆ ಹಾಕುವ ಕನಸಿನಲ್ಲೂ ನಮ್ಮದೇ ಮುಖ್ಯಪಾತ್ರ; ಮದುವೆಯ ಕನಸಿನಲ್ಲಿ ನಾವೇ ಮದುವಣಿಗರು. ನಮ್ಮ ಮದ ಹದಕ್ಕೆ ಬರುವುದು ಕನಸಿನಿಂದಲೇ.

ಮಾತ್ಸರ್ಯ—ಹಿಟ್ಲರನ್ನು ಯಹೂದ್ಯರು ಮೊದಲು ಕಾಡಿಸಿದ್ದು ಅವನ ಕನಸು ಕನಸುಗಳಲ್ಲೇ! ಕಂಸನನ್ನು ಕೃಷ್ಣನೂ ಹಾಗೆಯೇ. ಅದಕ್ಕೇ ಇರಬೇಕು, ಶತ್ರುವಾದರೆ ಮೂರು ಜನ್ಮದಲ್ಲಿ ಮೋಕ್ಷ, ಮಿತ್ರರಾದರೆ ಏಳು ಜನ್ಮಬೇಕು ಎಂಬ ಸಿದ್ಧಾಂತ ಸ್ಥಾಪನೆಯಾದದ್ದು. ಶತ್ರುವಾದರೆ, ಜಾಗ್ರದಾವಸ್ಥೆಯಲ್ಲೂ ಸ್ವಪ್ನಾವಸ್ಥೆಯಲ್ಲೂ ಕಣ್ಣುಮುಂದೆ ನಿಂತಿರುತ್ತದೆ ರೂಪ. ಇಲ್ಲೂ ಸಂಕೇತಗಳುಂಟು. ನರಸಿಂಹಯ್ಯ ನಿಮ್ಮ ಶತ್ರುವಾದರೆ, ನೀವು ಕನಸಿನಲ್ಲಿ ಸರ್ಕಸ್ಸಿಗೆ ಹೋಗಬಹುದು. ಹಿಟ್ಲರನೆ ಬಹುಶಃ ಉಕ್ಕಿನ ಕಾರ್ಖಾನೆ ಕನಸಾಗಬಹುದು; ಅಥವಾ ಗುಡ್ಡದ ಮೇಲಿನ ಕ್ರೈಸ್ತ ದೇವಾಲಯವೊಂದು ಉರುಳುವ ಕನಸಾಗಬಹುದು. ಒಟ್ಟಿನ ಮೇಲೆ ಅಂತರಂಗದ ಆಶಾ ಪರಿಪೂರ್ಣವಾದರಾಯಿತು. ಸುಖನಿದ್ದೆ ಬರುತ್ತದೆ.

ಇನ್ನೂ ಕನಶ್ಶಾಸ್ತ್ರದಲ್ಲಿ ಸ್ವಾರಸ್ಯವಾದ ಅನೇಕ ತತ್ವಗಳಿವೆ. ನಿಮ್ಮ ಕನಸುಗಳನ್ನು ನೀವು ನಮ್ಮ ವಿಳಾಸಕ್ಕೆ ವಿಶದವಾಗಿ ಬರೆದು ಕಳುಹಿಸಿದರೆ, ಮುಂದಿನ ಸಂಚಿಕೆಯಲ್ಲಿ ನಮ್ಮ ಟೀಕಾಸಹಿತವಾಗಿ ಅವುಗಳನ್ನು ಪ್ರಕಟಿಸಲು ಪ್ರಯತ್ನಿಸುತ್ತೇವೆ.

———o———



"ಇದೇನಪ್ಪ, ಎಲ್ಲ ಗೋಣಿಚೀಲ...........!!!"

"ಒಗ್ದು, ಇಸ್ತ್ರಿ ಮಾಡಿ ಮಡಿ ಮಾಡ್ಕೊಂಡು ಬಂದಿದ್ದೀನಿ ತಾಯಿ...........ನಾನೇ, ನೀವ್ನೋಡಿದ್ರಲ್ಲ—ಹೊಸ ಅಗಸ."

# ದೋಸೆಯ ಬೆಳಗು

(ಶ್ರೀ|| ಬೇಂದ್ರೆಯವರಲ್ಲಿ—ಕ್ಷಮಾಪಣೆಗಳೊಡನೆ)

- ೧ -

ಹೋಟೆಲು ಮಾಣೀ ಹಿಟ್ಟನು ರುಬ್ಬಿ
ದೋಸೆಯಾ ಕೊಯ್ದಾ
ಬೊರ್ರ್ ಬೊರ್ರ್—ದೋಸೇಯಾ ಕೊಯ್ದಾ,
ಆಲೂಗಡ್ಡೆಯ ಪಲ್ಯವನಿಟ್ಟು
ಕಾವಲಿಯಿಂದಾ ತೆಗೆದಾ
ಆಯ್ದಾ—ಕಾವಲಿಯಿಂದಾ ತೆಗೆದಾ.

- ೨ -

ಕೆಂಪಗೆ ಕಾದಾ ಬೆಣ್ಣೆ ಮಸಾಲೆ
ಗರಿಗರಿಯಾ ಗರಿಯು
ವೆನ್ನ-ಗರಿಗರಿಯಾಗರಿಯು
ಘಮಘಮಿಸುವಾ ಪಟಾಣಿ ಚಟ್ನಿ
ರುಚಿರುಚಿಯಿಂ—ಸವರೀ
ತಿನ್ನೆ—ರುಚಿರುಚಿಯಾ ಸವರೀ.

- ೩ -

ಚಟ್ನಿಯು ಕೆಳಗೆ ಪಲ್ಯವು ಮೇಲೆ
ತಟ್ಟೆಯಲಿ ತಂದು
ಮಡಿಸಿ—ತಟ್ಟೆಯಲಿ ತಂದು
ಹ್ಯಾಂಗೆ ಕೊಯ್ದನೊ ಹಿಟ್ಟನು ಕಲಸಿ
ಆಗಲಿ— ಎಂದು
ಈಗ—ಆಗಲೀ ಎಂದು.

- ೪ -

ಬಿಸಿಬಿಸಿ ದೋಸೆಯು ಕೈಯೊಳಗಿರಿಸಿ
ಉಫ್ ಉಫ್ ಎಂದು ಹೀರಿ-ಬಾಯೊಳು
ಉಫ್ ಉಫ್ ಎಂದು ಹೀರಿ,
ಹೊಡದೇ ಬಿಟ್ಟನ ಗಬಗಬ ಎಂದು
ತುಟಿಯೆಲ್ಲಾ ಸವರೀ
ಬೆರಳಿಂ—ತುಟಿಯೆಲ್ಲಾ ಸವರೀ.

- ೫ -

ಬಿಸಿ ಕಾಫಿಯಾ ಲೋಟಾದಿಂದ
ಸೊರಸೊರನೇ ಹೀರಿ
ಆರಿಸಿ—ಸೊರಸೊರನೇ ಹೀರಿ,
ಅಮೃತವಾ ತುಂಬಿಯಾಯಿತು
ಹುತ್ತೀನ ಚೀಲ
ಕ್ಷಣದೊಳು ತುತ್ತೀನ ಚೀಲ.

- ೬ -

ಕಂಡಿತು ಕಣ್ಣು ಸವಿದಿತು ನಾಲಿಗೆ
ಪಡೆದೀತೀ ದೇಹ
ದೋಸೆಯ—ಪಡೆದೀತೀ ದೇಹ,
ಕೇಳಿತು ಕಿವಿಯು ಮೂಸಿತು ಮೂಗು
ಮಸಾಲೆ ದೋಸೆಯನೀಗಾ
ಹೋಟಲ-ಮಸಾಲೆ ದೋಸೆಯನೀಗಾ

- ೭ -

ಅರಿಯದು ಹಳಸು ತಿಳಿಯದು
ಕಾಣದೊ ಖಾರಾ [ಹೊಲಸು
ಬಾಯಿಗೆ ಕಾಣಾದಿದೊ ಖಾರಾ
ಹೊಟ್ಟೆಯ ಹಸಿವೇ ಪ್ರೀತಿಯಿಂದಾ
ತಿನ್ನಿಸಿತೋ ಅಣ್ಣಾ
ಇದು ಖಾಲಿ ದೋಸೆಯಣ್ಣಾ.

—ಬಿ. ಎಸ್. ರಾಮಾಚಾರ್ಯ.

# ಹೀಗೆ ಮಾಡಬಹುದೇ

---

ಇಸ್ಪೀಟ್ ಆಟ ಮುಗಿಸಿಕೊಂಡು ಇನ್ನೇನು ಹೊರಡಬೇಕು ಅಷ್ಟರಲ್ಲೇ ಭೂಪತಿ ಬಂದು ಮಾತನಾಡಿಸುವುದಕ್ಕೆ ಶುರು ಮಾಡಿಯೇ ಬಿಟ್ಟ.

"ನೋಡಿದೆಯಾ ಮೊನ್ನೆ ನನಗಾಗಿದ್ದು"

"ಏನಾಯ್ತಪ್ಪಾ"

"ದಂಡಲ್ಲಿ ಬೈಸಿಕಲ್ಲಿಗೆ ಲೈಸೆನ್ಸಿಲ್ಲ ಎಂದು ಜುಲ್ಮಾನೆ ಹತ್ತು ರೂಪಾಯಿ ಹಾಕಿಯೇ ಬಿಟ್ಟರು."

"ಲೈಸೆನ್ಸಿಲ್ಲದೆ ದಂಡಿಗೆ ಯಾಕೆ ಹೋದೆ, ಪೇಟೆ ಸಂದಿಗಳಲ್ಲೇ ಸುತ್ತಬೇಕಾಗಿತ್ತು."

"ಅದಲ್ಲಾ ಕಣಯ್ಯಾ, ನನ್ನೆದುರಿಗೆ ಇನ್ನೊಬ್ಬ ಲೈಸೆನ್ಸಿಲ್ಲದೆ ಹೋದ, ಅವನಿಗೆ ಐದೇ ರೂಪಾಯಿ ಜುಲ್ಮಾನೆ ಹಾಕಿದರು."

"ಅದು ಯಾಕೆ?"

"ಯಾಕೇನು ಬಂತು ಯಾಕೆ. ಅವನು ಪೋಲೀಸಿನವರಿಗೆ ಲಂಚಕೊಟ್ಟಿದ್ದಿರಬೇಕು, ಇದು ಮೊದಲನೆ ಬಾರಿ ಅವನು ಸಿಕ್ಕಿದ್ದಂತೆ ಎಂದು ನೆಪಹೂಡಿದರು."

"ನಿನಗೆ ಎಷ್ಟು ಸಾರಿ ಶಿಕ್ಷೆಯಾಗಿತ್ತು?"

"ಅದೆಲ್ಲಾ ಯಾಕೆ, ಮೂರನೆಯ ಬಾರಿ" ಆದರೆ ನೋಡಯ್ಯಾ, ಜುಲ್ಮಾನೆ ಹಾಕಿದರೆ ಎಲ್ಲರಿಗೂ ಒಂದೇ ತರಹ ಹಾಕಬೇಕು. ರಾಮನಿಗಾಗಲಿ, ರಾವಣನಿಗಾಗಲಿ ಒಂದೇ ನ್ಯಾಯ ದೊರಕಬೇಕು. ಮೊದಲನೆ ತಪ್ಪಾದರೇನು, ಹತ್ತನೆಯದಾದರೇನು ತಪ್ಪು ತಪ್ಪೇ. ಇದರಲೆಲ್ಲಾ ನೋಡು, ನಮ್ಮ ರೈಲ್ವೆಯವರೇ ನ್ಯಾಯಸ್ಥರು. ಯಾರು ಸರಪಣಿ ಎಳೆದು ಗಾಡಿ ನಿಲ್ಲಿಸಲೀ ಐವತ್ತು ರೂಪಾಯಿ ಜುಲ್ಮಾನೆ. ಹಳ್ಳಿಯವನ ಛತಿ, ಆಗಲೀ, ದಿಳ್ಳಿಯವನ ಕೈಗೋಲಾಗಲಿ, ಸರಪಣಿ ಮೇಲೆ ತೂಗು ಹಾಕಿದರೆ ಐವತ್ತು ರೂಪಾಯಿ ಜುಲ್ಮಾನೆ. ಮನುಷ್ಯನ ಬಣ್ಣ ನೋಡಿ, ಎಷ್ಟು ಬಾರಿ ಹಾಕಿದ ಎಂಬುದನ್ನು ನೋಡಿ, ಜುಲ್ಮಾನೆಯನ್ನು ಹಾಕುವುದಿಲ್ಲ. ನಮ್ಮ ಜೇಬಿನ ಹಣ ನೋಡಿಕೊಂಡು ಎಷ್ಟು ಬಾರಿ ಬೇಕಾದರೂ ಸರಪಣಿಯನ್ನೆಳೆಯಬಹುದು. ನಾನೇನಾದರೂ ನ್ಯಾಯ ಮಂತ್ರಿಯಾದರೆ, ಇಂತಿಂಥಾ ತಪ್ಪಿಗೆ ಇಷ್ಟು ಇಷ್ಟು ಜುಲ್ಮಾನೆ ಎಂದು ಜಾಹೀರಾತು ಮಾಡಿಸಿಬಿಡುತ್ತಿದ್ದೆ.

ಸರಕಾರದ ತೋಟದಲ್ಲಿ ಹಣ್ಣು ಕಿತ್ತರೆ ಹತ್ತು ರೂಪಾಯಿ. ರಸ್ತೆ ಬಲಗಡೆ ಬೈಸಿಕಲ್ಲು ಬಿಟ್ಟರೆ ಐದು ರೂಪಾಯಿ. ವಿದ್ಯುಚ್ಛಕ್ತಿಯ ದುಂಡು ಗ್ಲೋಬನ್ನು ಒಡೆದರೆ, ಮೂರು ರೂಪಾಯಿ ಹೀಗೆ ಎಲ್ಲವನ್ನೂ ಜಾಹೀರಾತು ಮಾಡಿಸಿ ಬಿಡುತ್ತಿದ್ದೆ. ನೋಡು ನಿನಗೆ ಹೇಳುತ್ತೇನೆ. ಇಷ್ಟು ವಯಸ್ಸಾಗಿದೆ ನನಗೆ, ಆದರೆ ರಸ್ತೆಯಲ್ಲಿ ಈ ವಿದ್ಯುಚ್ಛಕ್ತಿಯ ಗ್ಲೋಬುಗಳನ್ನು ಕಂಡರೆ ಯಾರೂ ನನ್ನನ್ನು ಕಾಣವಿದ್ದರೆ, ಒಂದು ಕವಣೆ ಬೀಸಿ ಅದನ್ನು ಒಡೆದೇ ಬಿಡೋಣ ಎನ್ನಿಸುತ್ತದೆ. ಮನಸ್ಸು ಹದಕ್ಕೆ ಬರುವುದೇ ಕಷ್ಟ—ಹೀಗೆ ಮೂರು ರೂಪಾಯಿ ಜುಲ್ಮಾನೆ ಅಂದರೆ, ನಮ್ಮ ಯೋಗ್ಯತೆಗೆ ಸರಿಯಾಗಿ ಮೂರೋ ನಾಲ್ಕೋ ಗ್ಲೋಬುಗಳನ್ನು ಒಡೆದು ಶಾಂತಚಿತ್ತರಾಗಿ ಮನೆಗೆ ಹೋಗಬಹುದು. ಅದಿಲ್ಲದಿದ್ದರೆ, ಆ ಹಾಳು ಚಪಲಮನಸ್ಸಿನಲ್ಲೇ ಉಳಿದುಕೊಂಡು ರೂಪಾಂತರವನ್ನು ಹೊಂದಿ, ಪರೀಕ್ಷೆ ಉತ್ತರಗಳನ್ನು ನೋಡುವಾಗ ಪಾಪಿ ಹುಡುಗರ ಮೇಲೆ ಸೇಡು ತೀರಿಸಿದಂತಾಗುವುದು.

"ಅಲ್ಲಾ ಕಣಯ್ಯಾ, ಎಲ್ಲಾ ತಪ್ಪುಗಳನ್ನೂ, ಎಲ್ಲಾ ಹಂಬಲಗಳನ್ನೂ ಪಟ್ಟಿ ಹಾಕಲು ಆಗುತ್ತದಯೇ?"

"ಆಗದೇ ಏನಯ್ಯಾ" ಎಂದು ವಿಲಾಸ ಹುರಿಮಾಡಿದ.

"ಹಾಗಲ್ಲಪ್ಪಾ. ನನ್ನ ಹಂಬಲು ವಿಚಿತ್ರ. ನಾನು ಯಾವಾಗಲೂ ಒಂದು ಜತೆ ಕಿರು ಕತ್ತರಿಯನ್ನು ಇಟ್ಟುಕೊಂಡಿದ್ದೇನೆ. ನನಗೆ ವಿಶೇಷ ಚಪಲ ಏನು ಗೊತ್ತೆ?"

"ಉಗುರು ಕತ್ತರಿಸಿಕೊಳ್ಳುವುದು."

"ಅಲ್ಲ ಅಲ್ಲ. ಮೃದುವಾದ ಹೊರವಾದ ಹುರಿಮೀಸೆ ಕಂಡರೆ, ಹಾಗೆಯೇ ಒಂದು ಅರ್ಧವನ್ನು ಕತ್ತರಿಸಿಬಿಡಬೇಕು ಎಂದು ತೀವ್ರ ಚಪಲವಾಗುತ್ತದೆ ಹಾಗೆ ಮಾಡಿ ಮನಶ್ಶಾಂತಿ ಹೊಂದಿದರೆ ಏನು ಜುಲ್ಮಾನೆ ಕೊಡಬೇಕಾಗಬಹುದು?"

✤ ✤ ✤

ಹುರಿಮೀಸೆಯ ಭೂಪತಿ ಮಾತಿಗೆ ಉತ್ತರ ಕೊಡದೆ ಹಾಗೆಯೇ ಹೊರಟು ಹೋಗುವುದೇ, ಇಲ್ಲಿನ ತನಕ ಸಿಗಲೇಬೇಡವೇ?

✤ ✤ ✤

——0——



## ಉಪ್ಪು—ಹುಳಿ

(ಗ್ರಂಥಕರ್ತರು—ಶ್ರೀ ಬಿ. ಕೆ. ರಾಮಚಂದ್ರರಾಯರು.)

---

ಉಪ್ಪುಂಡ ಮನೆಗೆ ಎರಡು ಬಗೆಯಬಾರದಂತೆ—ಹೆಚ್ಚು ಉಪ್ಪುಂಡ ಮನೆಗೆ ನಾಲ್ಕು ಬಗೆಯಬಾರದು. ಆದರೆ, ಹುಳಿಯುಪ್ಪು—ಸರಿದೂಗಿದ ಹುಳಿಯುಪ್ಪು ಉಂಡ ಮನೆಯಲ್ಲಿ ಚಪ್ಪರಿಸದೇ ಇರಲೇ ಬಾರದು ಅಂತಹದೇ ಸಣ್ಣ ಕತೆ. ಸರಿದೂಗಿದ ಹುಳಿಯುಪ್ಪು ಚಪ್ಪರಿಸುವ ಜಾತಿಯದು. ಕೊರವಂಜಿಯ ಮಾನ್ಯ ಲೇಖಕರಲ್ಲೊಬ್ಬರು ಬರೆದ ಈ ನೀಳ್ಗತೆಯನ್ನು ನಾವು ಹೆಚ್ಚಾಗಿ ಹೊಗಳಿದರೆ, ಆತ್ಮ ಪ್ರಶಂಸೆ ಎಂದೆನ್ನುವರೋ ಏನೋ—ಅದಕ್ಕಾಗಿಯೇ ಇಷ್ಟೇ ಹೇಳುವೆವು, ರಸಜೀವನದಲ್ಲಿ ಸುಖಪಡುವರಾದರೆ ಈ ಕತೆಯನ್ನು ಓದಿ, ನಿರಸ ಜೀವನ ನಡೆಸುವ ಸನ್ಯಾಸಿಗಳಾದರೆ ಈ ಗೋಜಿಗೆ ಹೋಗಬೇಡಿ.

---

ಕೃತಕ ಹಲ್ಲುಗಳನ್ನು ಇನ್ನು ಮೇಲೆ ಕಬ್ಬಿಣದಲ್ಲಿ ಮಾಡುತ್ತಾರಂತೆ.

—ವರಮಾನ ತೆರಿಗೆ ಅಧಿಕಾರಿಗಳಿಗೆ ಸು-ಸುದ್ದಿ.

✤ ✤ ✤

# ಬಡಾಯಿ ರಂಗಣ್ಣ ಬೇಸ್ತು ಬಿದ್ದದ್ದು

ರಂಗಣ್ಣನವರ ಬಳಿ ಮಾತನಾಡುವುದಕ್ಕೆ ಎಲ್ಲರೂ ಹೆದರುತ್ತಿದ್ದರು. ಏಕೆಂದರೆ ಒಂದು ಮಾತನಾಡಿದರೆ, ಅವರು ಹತ್ತುಮಾತನಾಡಿ ಎದುರಾಳಿಯನ್ನು ಸುಸ್ತು ಮಾಡಿಬಿಡುತ್ತಿದ್ದರು.

ಹೀಗೇ ಬಹಳಕಾಲವಿರಲಿಲ್ಲ. ನಡೆಯುವ, ಎಡವಲೇ ಬೇಕು. ಒಂದು ದಿನ ರಂಗಣ್ಣನವರು ಪಾರ್ಕಿನಲ್ಲಿ ಕುಳಿತು, ತಂಪಾದ ಗಾಳಿ ಸೇವೆಯನ್ನು ಮಾಡುತಿದಾರೆ. ಸಾಯಂಕಾಲ ಆರುಘಂಟೆಯ ಸಮಯ. ರಂಗಣ್ಣನವರೊಂದಿಗೆ ಮಾತನಾಡಲು ಯಾರೂ ಇರಲಿಲ್ಲ. ಅವರಿಗೆ ಬಹಳ ಬೇಜಾರಾಗಿ ಹೋಯಿತು. ಹಾಗೇ ಸುತ್ತುಮುತ್ತಾ ನೋಡಿದರು. ಪಾರ್ಕಿನ ಅಮೂಲೆಯಲ್ಲಿರುವ ಕಲ್ಲು ಬೆಂಚಿನಮೇಲೆ ಯಾವುದೋ ವ್ಯಕ್ತಿಯೊಂದು, ತನ್ನ ಪಾಡಿಗೆ ತಾನು ಪೇಪರೋದುತ್ತಾ ಕುಳಿತಿದೆ. ರಂಗಣ್ಣನವರಿಗೆ ಆ ವ್ಯಕ್ತಿಯೊಡನೆ ಮಾತನಾಡಬೇಕೆಂದು ಚಪಲವಾಯಿತು. ಸರಿ, ಮೆಲ್ಲಗೆ ಆ ಕಲ್ಲು ಬೆಂಚಿನ ಬಳಿಗೆ ಹೋಗಿ ಕೊನೆಯಲ್ಲಿ ಕುಳಿತುಕೊಂಡರು.

"ಏನ್‌ಸ್ವಾಮಿ ಈವತ್ತಿನ ಸಮಾಚಾರ. ನಮಗೂ ಸ್ವಲ್ಪ ಓದಿ ಹೇಳಿ ಪರವಾಗಿಲ್ಲ" ರಂಗಣ್ಣ ಆ ವ್ಯಕ್ತಿಯನ್ನು ಮಾತನಾಡಿಸಿಯೇ ಬಿಟ್ಟರು.

ಆ ಪೇಪರ್ ವ್ಯಕ್ತಿ ತಿರುಗಿನೋಡಿದ. ಯಾರೋ ದೊಡ್ಡ ಮನುಷ್ಯರು. ಅಲ್ಲದೆ, ತಾನೂ ಠೀವಿಯಿಂದ, ಓದುವುದನ್ನು ಪ್ರದರ್ಶಿಸಬೇಕೆಂಬ ಆಸೆ ಬೇರೆ. ಸರಿ, ಓದಲು ಪ್ರಾರಂಭಮಾಡಿದ.

"ಸರ್ ..... ಯ್ಯನವರು, ಮೋಟಾರ್ ಕೈಗಾರಿಕೆಯಮೇಲೆ, ಬೊಂಬಾಯಿನಲ್ಲಿ ಭಾಷಣಮಾಡಿದರು".

ರಂಗಣ್ಣ—ಓಹೋ, ಆ .... ಅಯ್ಯನೇ, ಭಾಷಣಾ ಬೇರೆ ಮಾಡ್ತಾನೋ ಅವನು. ನಾನೂ ಅವನೂ ಗೋಲೀ ಸ್ನೇಹಿತರು. ಕೃಷ್ಣರಾಜಸಾಗರ ಕಟ್ಟೋದಕ್ಕೆ ನಾನೇ ಅವನಿಗೆ ಸೂಚನೆಕೊಟ್ಟಿದ್ದು. ಒಂದು ದಿನ, ನಾನೂ ... ಅಯ್ಯನೂ ಅದೇ ಮೈದಾನದಲ್ಲಿ ಹೋಗುತ್ತಿದ್ದೆವು. ಇಬ್ಬರು ಹುಡುಗರು ಕಲ್ವೆತೋಡಿ, ನೀರುಬಿಟ್ಟು, ಕಟ್ಟೆಕಟ್ಟಿ, ಆಟ ಆಡುತ್ತಿದ್ದರು. ಅವರನ್ನು ನೋಡಿ, ನಾನು, ನೋಡಿದ್ಯಾ ....ಅಯ್ಯಾ, ಹೀಗೇ ಕಾವೇರಿನದಿಗೆ ಅಣೆಕಟ್ಟೆ ಕಟ್ಟಿದರೆ ರೈತರಿಗೆ ಎಷ್ಟು ಉಪಕಾರವಾಗುತ್ತೆ, ಅಂದೆ. ಸರಿ, ಮುಂದಿನ ವರ್ಷದ ಹೊತ್ತಿಗೆ ಕಟ್ಟೇ ಬಿಟ್ಟ ಭೂಪ. ಹೇಳಿದವನು ನಾನು. ಹೆಸರವನಿಗೆ. ರಂಗಣ್ಣನವರ ಮಾತುಗಳನ್ನು ಕೇಳಿ ದಂಗಾಗಿ ಬಿಟ್ಟ ಆ ವ್ಯಕ್ತಿ.

“ಶ್ರೀ ಶ್ರೀನಿವಾಸಶಾಸ್ತ್ರಿಗಳು ... ... ......” ಓಹೋ, ಆಗಲೇ ಶ್ರೀ ಶ್ರೀ ಶ್ರೀಯಾಗಿಬಿಟ್ಟನೋ ಅವನು. ಪೇಪರಿಗೆ ಬೇರೆ ಬರಿಯುವುದು ....ಆ ವ್ಯಕ್ತಿಗೆ ತಡೆಯಲಾಗಲಿಲ್ಲ. ಪೇಪರನ್ನು ರಂಗಣ್ಣನವರ ಮುಂದೆ ಎಸೆದು, ನೀವೇ ಓದಿಕೊಳ್ಳಿಸಾರ್ ಎಂದು ಸುಮ್ಮನೆ ಕೂತುಬಿಟ್ಟ.

ರಂಗಣ್ಣನವರು ಮುಗುಳ್ನಗೆಯೊಡನೆ, ಓರೆನೋಟದಿಂದ ಆ ವ್ಯಕ್ತಿಯನ್ನು ನೋಡುತ್ತಾ, ಓದಲು ಪ್ರಾರಂಭಿಸಿದರು. “ಹಿಟ್ಲರ್ ಮ್ಯೂನಿಕ್ ಬೀರ್ ಸೆಲಾರಿನಲ್ಲಿ” ......ಓಹೋ ಅಡಾಲ್ಫ್, ಒಂದುಸಲ ಬರ್ಲಿನ್ ಹೋಟೆಲಿನಲ್ಲಿ ಅವನನ್ನು ಕಂಡಿದ್ದೆ. ಆ ಪೇಪರ್‌ವ್ಯಕ್ತಿ ತನ್ನದೂ ಒಂದು ಬ್ರಹ್ಮಾಸ್ತ್ರವನ್ನು ಬಿಟ್ಟ. ಆದರೂ ರಂಗಣ್ಣನವರು ಜಗ್ಗಲಿಲ್ಲ. ಪುನಃ ಓದಲು ಪ್ರಾರಂಭಮಾಡಿದರು. ಮುಸೋಲಿನಿಯ ರಾಜ್ಯಪರಿತ್ಯಾಗ. ಇಟಲಿಯ ...... ....

ಓಹೋ, ಆಬಿಸೀನಿಯಾನೇ ಅವನಪಿಂಡ. ನಾನೂ, ಅವನೂ...... ಅಷ್ಟ್ರಹೊತ್ತಿಗೆ ರಂಗಣ್ಣ ಆ ಪಾರ್ಕಿನಿಂದಲೇ ಪಲಾಯನ ಕಿತ್ತಿದ್ದರು.

—ಎ. ಕೇಶವ್.

———o———



“......ನಾಯಿ ಮೇಲೆ ಬಿದ್ಬಿಡ್ತಾ ಇದ್ನಲ್ಲಾಂತ ಹೇಳ್ತಿದ್ದೆ......ನೀವು......”
“ಅಯ್ಯೋ ನನ್ಮೇಲ್ ಬಿದ್ಬಿಡ್ತೀನಂತ ತಿಳ್ಕೊಂಡು ನಾಯಿ ಕಡೆ ಬಿದ್ಬಿಡ್ದಾಗಿತ್ತೆ.”

#  ಸಾಮಾನು ಕಟ್ಟುವಿಕೆ 

---

"ಇದೇನು, ಇನ್ನೂ ಹಾಗೆಯೇ ಕುಳಿತಿದ್ದೀರಲ್ಲ! ಸಾಮಾನೆಲ್ಲ ಕಟ್ಟಿ ಆಯಿತೇನು"

"ಕಟ್ಟಿ ಆಯಿತು. ಎಂದು ಹೇಳುವ ಹಾಗಿಲ್ಲ....ಆದರೂ ಮುಕ್ಕಾಲೆಲ್ಲಾ ಕಟ್ಟಿದಂತೆಯೇ. ಅದರ ವಿಚಾರವೇ ಆಲೋಚನೆಮಾಡುತ್ತಿದ್ದೇನೆ. ಆಲೋಚನೆ ಪೂರ್ತಿಯಾದಮೇಲೆ ಕಟ್ಟುವುದೆಲ್ಲಾ ಎಷ್ಟುಹೊತ್ತು, ಮಹಾ?"

"ನೀವು ತೆಗೆದುಕೊಂಡು ಹೋಗಬೇಕೆಂದಿರುವ ಪೆಟ್ಟಿಗೆ ಟ್ರಂಕುಗಳನ್ನು ತೆಗೆದಿಡಿಸಿದ್ದೀರಾ"?

"ಇಲ್ಲ, ಇನ್ನೂ ಇಲ್ಲ. ಅದೇ ವಿಷಯವನ್ನೇ ಯೋಚಿಸುತ್ತಿದ್ದೆ. ಆ ಹಳದಿ ಟ್ರಂಕು ತೆಗೆದುಕೊಂಡು ಹೋಗುವುದೇ, ಇಲ್ಲ, ಮದರಾಸಿನಿಂದ ತಂದ ಸೂಟ್‌ಕೇಸು ತೆಗೆದುಕೊಂಡು ಹೋಗುವುದೇ ಎಂದು.... ಅಲ್ಲ, ಹಾಗೆಯೇ ಯೋಚನೆಮಾಡಿದರೆ, ಕಾಲ ಹೇಗೆ ಬದಲಾಯಿಸುತ್ತೆ ನೋಡಿದಿಯಾ? ಹಿಂದಿನ ಕಾಲದಲ್ಲಿ ಎಲ್ಲಿಗಾದರೂ ಹೊರಡಬೇಕೆಂದರೆ, ಒಂದು ಹಳೇ ಪಂಚೆಯಲ್ಲಿಯೋ, ದುಪ್ಪಟಿಯಲ್ಲಿಯೋ ಬಟ್ಟೆ, ಬರೆ ಎಲ್ಲಾ ಹಾಕಿ ಕಟ್ಟಿ, ಒಂದು ಗಂಟು ಮಾಡಿಕೊಂಡು ಹೊರಟು ಬಿಡುತ್ತಿದ್ದರು. ಆಮೇಲೆ ಹಸುಬೆ ಚೀಲಗಳು ಬಂದುವು. ಈಗ ಆ ಚೀಲಗಳನ್ನು ನೋಡಬೇಕೆಂದು ಬಯಸಿದರೂ ಕಾಣುವಂತಿಲ್ಲ. ನಂತರ, ತರಹಾವಾರಿ ಟ್ರಂಕುಗಳು ಬಂದವು. ಈಗಲೋ ತೊಗಲಿನ ಸೂಟ್ ಕೇಸುಗಳು! ಯಾರ ಕೈಲಿ ನೋಡಿದರೂ ಒಂದು ಸೂಟ್‌ಕೇಸು! ಒಂದು ಯಾಕೆ, ಎರಡು, ಮೂರು! —ಕ್ಷೌರದ ಸಾಮಾನುಗಳಿಗೇ ಒಂದು ಸೂಟ್‌ಕೇಸು, ಬಟ್ಟೆ ಬರೆಗಳಿಗೇ ಒಂದು ಸೂಟ್‌ಕೇಸು, ಕಾಗದಪತ್ರಗಳಿಗೇ ಒಂದು ಸೂಟ್‌ಕೇಸು, ಕಡೆಗೆ ವಿಭೂತಿ ನಾಮ ಇವುಗಳಿಗೇ ಒಂದು ಸೂಟ್‌ಕೇಸು!—ಕೃಷ್ಣಾಜಿನ ಹೊದಿಸಿಬಿಟ್ಟರೆ ಅದು ಸಾಧುಯೇ ಆಗಿ ಹೋಯಿತು! ಆದರೆ, ನಾಮ ವಿಭೂತಿಗಳನ್ನು ಹಾಕಿಕೊಳ್ಳುವ ಜನರೇ ಕಡಿಮೆಯಾಗಿ ಹೋದರು ಅನ್ನು. ಆದುದರಿಂದ ಅವು ಅಷ್ಟು ಬಳಕೆಗೆ ಬರಲಾರವೆಂದು ತೋರತ್ತೆ....ಹಾಗೇ ಯೋಚಿಸಿದರೆ, ಆ ಹಳೇಕಾಲದ ಗಂಟೇ ಉತ್ತಮವಾಗಿತ್ತೆಂದು ನನಗೆ ಕಾಣುತ್ತೆ. ಒಂದು ಪಂಚೆಯಲ್ಲಿ ಹಾಕಿ ಕಟ್ಟಿ, ಗಂಟು ತಲೇ ಮೇಲೇರಿಸಿ ಹೊರಟ ಎಂದರೆ....".

"ಬರೀ ಈ ಉಪನ್ಯಾಸದಲ್ಲಿಯೇ ಇರುತ್ತೀರೋ, ಇಲ್ಲಿ, ಕೆಲಸಕ್ಕೇನಾದರೂ ಕೈಹಾಕುತ್ತೀರೋ!"

"ಇಲ್ಲಿ ನೋಡು, ಸರಸು, ಕಣ್ಣುಮುಚ್ಚಿಕೊಂಡು ಸುಮ್ಮನೆ ದಬಾದುಬಿಯಾಗಿ ಕೆಲಸಕ್ಕೆ ಕೈಹಚ್ಚುವ ವಾಡಿಕೆ ನನಗಿಲ್ಲ ಎನ್ನುವುದು ನಿನಗೆಗೊತ್ತು.

ಸಾಮಾನು ಕಟ್ಟುವುದು ಸಾಮಾನ್ಯ ಕೆಲಸವೇ? ಮೊದಲೇ ಚೆನ್ನಾಗಿ ಪರ್ಯಾಲೋಚಿಸಿ. ಅಚ್ಚುಕಟ್ಟುಮಾಡಿಕೊಂಡು, ಹೀಗೇ ಮುಂದುವರಿಯ ಬೇಕೆಂದು ನಿರ್ಧರಿಸಿ, ನಂತರ ಕೆಲಸಕ್ಕೆ ತೊಡಗಬೇಕು. ಸೇನಾಧಿಪತಿ ಯುದ್ಧಕ್ಕೆ ಹೊರಡುವ ಮೊದಲು ಎಷ್ಟು ಗುಣಾಕಾರ ಹಾಕಿಕೊಳ್ಳುತ್ತಾನೋ ಅದಕ್ಕಿಂತ ಹೆಚ್ಚು ಗುಣಾಕಾರಹಾಕಬೇಕು, ನೋಡು, ಸಾಮಾನು ಕಟ್ಟುವುದಕ್ಕೆ!"

"ಹೋಗಲಿ, ಆ 'ಬೇಕಾದ ಅಚ್ಚುಕಟ್ಟು'— ಅದನ್ನಾದರೂ ಮಾಡಿಕೊಂಡಿದ್ದೀರಾ? ಬೇಕಾದ ಬಟ್ಟೆ ಬರೆ ತೆಗೆದಿಡುವ ಹಾಗೆ ಹೇಳಿದ್ದೇನು?"

"ಇಲ್ಲ, ಅದೆಲ್ಲಾ ಜವಾನರಿಂದಾಗೋ ಕೆಲಸವಲ್ಲ, ಸರಸು ಅದು ಖುದ್ದಾಗಿ ನಾವೇ ಮಾಡಬೇಕಾದದ್ದು. ನಿನಗೆ ಹೇಳಿದ್ದೇನೆಂದು ತೋರುತ್ತೆ—ನಿನ್ನನ್ನು ಮದುವೆಯಾಗುವುದಕ್ಕೆ ಮೊದಲು, ಒಬ್ಬರ ಮನೆಗೆ ಒಂದು ಹೆಣ್ಣು ನೋಡಬೇಕೆಂದು ಹೊರಟಾಗ ನಮ್ಮ ಆಳು ಸರಿಗೆ ಪಂಚೆಗೆ ಬದಲಾಗಿ ಸರಿಗೆ ರುಮಾಲುಗಳನ್ನು ಜೋಡಿಸಿಬಿಟ್ಟಿದ್ದನು. ಆಗಿನ ಕಾಲದ ರುಮಾಲುಗಳು ಗೊತ್ತಿದೆಯಲ್ಲಾ, ಮೂಲೆಯಿಂದ ಮೂಲೆಗೆ ಹರಿದಿರುವ ತ್ರಿಕೋಣಾಕಾರಗಳು! ಸ್ನಾನಮಾಡಿ ಪಂಚೆಯುಟ್ಟುಕೊಳ್ಳೋಣವೆಂದರೆ, ಈ ರುಮಾಲು! ಈ 'ಹನುಮಾನ್ ಚಡ್ಡಿ" ಉಟ್ಟು ಹೆಣ್ಣು ಕೊಡಬೇಕೆಂದಿರುವವರ ಮುಂದೆ ಹೇಗೆ ಹೋಗಿ ಮುಖ ತೋರಿಸುವುದು? ಬಚ್ಚಲು ಮನೆಯಿಂದ ಹಾಗೇ ಹಿತ್ತಿಲು ಬಾಗಿಲು ಹಾದು ರೈಲ್ವೆಸ್ಟೇಷನ್ನಿಗೆ ಪರಾರಿ...."

"ಹೌದು, ಹೌದು, ಆದ ಅನಾಹುತವೇನೋ? ಆ ಗುನ್ನ ಮುಖದ ಗಯ್ಯಾಳಿ ತಪ್ಪಿ, ನನ್ನನ್ನು ಕೈಹಿಡಿದಿರಿ!—ನಿಮ್ಮ ಪುಣ್ಯ ಚೆನ್ನಾಗಿತ್ತು!... ಅದು ಹಾಗಿರಲಿ, ಎದ್ದು ಶುರುಮಾಡದಿದ್ದರೆ, ನೀವು ಮುಗಿಸುವ ಹಾಗೇ ಇಲ್ಲ."

"ಶುರುಮಾಡದ ಕೆಲಸವನ್ನು ಮುಗಿಸುವುದಕ್ಕಾಗುವುದಿಲ್ಲ ಎನ್ನುವುದು ದೊಡ್ಡ ವಿಚಾರವೆ? ನೀನು ಹೀಗಲ್ಲಾ ಹೇಳುತ್ತ ಕುಳಿತರೆ ನನಗೆ ಈ ಕೆಲಸಕ್ಕೆ ಉತ್ಸಾಹವೇ ಉಂಟಾಗುವುದಿಲ್ಲ, ನೋಡು....ಅಲ್ಲ, ನೀನೇನು ಏಳುಘಂಟೆ ರೈಲಿಗೇ ಹೊರಡೋಣವೆಂದು ಖಂಡಿತಮಾಡಿದ್ದೀಯೇನು? ಒಂಭತ್ತಕ್ಕೆ ಹೊರಡುತ್ತದಲ್ಲಾ ಅದರಲ್ಲಿ ..."

"ಉಹ್ಞು! ಏಳು ಘಂಟೆ ರೈಲಿಗೇ ಹೊರಡಬೇಕು. ಆರು ಘಂಟೆಗೆ ಸರಿಯಾಗಿ ಗಾಡಿಗೂ ಹೇಳಿದೆ. ನನ್ನ ಸಾಮಾನೆಲ್ಲಾ ಕಟ್ಟಿ ಆಗಿದೆ. ನೀವು ನಿಮ್ಮದನ್ನು ಕಟ್ಟಿ ಮುಗಿಸಿ"

"ಮುಗಿಸುತ್ತೇನೆ, ಮುಗಿಸುತ್ತೇನೆ. ನಿನ್ನ ಮೇಲ್ಪಂಕ್ತಿಯಾವತ್ತು ನಾನು ಮೀರಿದ್ದು? ಅದರೆನೋಡು, ಹೆಂಗಸರಿಗೆ ಇದೆಲ್ಲಾ ಒಂದು ರೀತಿ. ಹೊರಡಬೇಕು, ಸಾಮಾನು ಕಟ್ಟಬೇಕು ಎಂದರೆ ಅವರಿಗೆ ಅದೇ ಒಂದು ಆಶೆ, ಸಂಭ್ರಮ—".

"ಅವರಿಗೆ ಆಶೆಯೇನೂ ಇಲ್ಲ. ಮಾಡಬೇಕಾದ ಕೆಲಸ ಬೇಗಮಾಡಿ ಮುಗಿಸುತ್ತಾರೆ, ಅಷ್ಟೆ. ಗಂಡಸರ ಹಾಗೆ ಆಲೋಚನೆಮಾಡುತ್ತೇನೆಂದು ಕಾಲ ಕಳೆಯುವುದಿಲ್ಲ".

"ಒಪ್ಪಿಕೊಳ್ಳಬೇಕಾದ ವಿಚಾರವೇ. ನಾನು ಹೇಳುತ್ತೇನಲ್ಲಾ—ಹೆಂಗಸರು ತಮ್ಮ ಕೆಲಸಗಳಲ್ಲಿ ಗಂಡಸರಿಗಿಂತಲೂ ಎಷ್ಟೋ ಸಾಹಸವಂತರು, ಉತ್ಸಾಹ ವಂತರು ಎಂದು ತಮ್ಮ ಕೆಲಸಗಳಲ್ಲೇ ಏಕೆ, ಗಂಡಸರು ಮಾಡಬೇಕಾದ ಕೆಲಸ ಗಳಲ್ಲಿಯೂ ಸಹ!—ಉದಾಹರಣೆಗೆ ಸಂಯುಕ್ತೆ, ಲಕ್ಷ್ಮೀಬಾಯಿ, ಚಾಂದಬೀಬಿ ಇವರನ್ನು ನೋಡು. ಈಗಿನ ರಷ್ಯಾ ಮಹಿಳೆಯರನ್ನು ನೋಡು...."

"ನಾನು ಯಾವ ಬೀಬಿ, ಮಹಿಳೆಯರನ್ನೂ ನೋಡುವುದಿಲ್ಲ, ಗಡಿಯಾರ ನೋಡುತ್ತಿದ್ದೇನೆ. ಅರ್ಧರಾತ್ರಿಯಾದರೂ ಈ ಮಾತಿನಲ್ಲೇ ಕಾಲ ಕಳೆಯ ಬೇಕೆಂದಿದ್ದೀರೇನು ?"

"ಇಲ್ಲ. ಅದು ನನ್ನ ಇಷ್ಟ ಎಂದು ಹೇಳಲಾರೆ. ಆದರೆ, ಈ ಸಾಮಾನು ಕಟ್ಟುವ ವಿಚಾರಕ್ಕೆ ರಾತ್ರಿ ತೊಡಗಬಾರದು, ಸರಸು. ಅದಕ್ಕೆ ಬುದ್ಧಿ ಚುರು ಕಾಗಿ ತಿಳಿಯಾಗಿರಬೇಕು. ಆಯಾಸವಿರಬಾರದು, ಬೇಸರವಿರಬಾರದು... ಪಂಚ ಪಂಚ ಉಷಃಕಾಲಕ್ಕೆ ಎದ್ದು, ಮುಖ ತೊಳೆದು, ಒಂದು ಲೋಟ ಬಿಸಿ ಬಿಸಿ ಕಾಫಿ ಕುಡಿದು, ಈ ಕೆಲಸಕ್ಕೆ ಕೈಹಾಕಿದ ಎಂದರೆ...."

"ಬಲ್ಲೆ, ನಿಮ್ಮ ಪಂಚಪಂಚ ಉಷಃಕಾಲಕ್ಕೆ ಏಳುವುದನ್ನು. ನಾಲ್ಕು ಘಂಟೆಗೆ ಎಬ್ಬಿಸುವುದಕ್ಕಾರಂಭಿಸಿದರೆ ಅಷ್ಟ, ಅಷ್ಟ, ನವಃಕಾಲಕ್ಕೆ ಎದ್ದರೆ ನಮ್ಮ ಪುಣ್ಯ...."

"ಅನ್ಯಾಯ, ನೀನು ಹೇಳುವುದು ಅನ್ಯಾಯ... ಇನ್ನೊಂದು ನೋಡು, ರಾತ್ರಿ ಸಾಮಾನು ಕಟ್ಟಿಬಿಟ್ಟು, ಬೆಳಗ್ಗೆ ಯಾವುದಾದರೂ ಸಾಮಾನು ಬೇಕಾದರೆ, ಮತ್ತೆ ಎಲ್ಲಾ ಬಿಚ್ಚುವುದಕ್ಕಾದೀತೆ? ಹಿಂದೆ ಒಂದು ಸಲ ಹೀಗಾಗಿ, ಆಳು ನನ್ನ ಚಪ್ಪಲಿಗಳನ್ನು ಕಟ್ಟಿಬಿಟ್ಟು, ಬೆಳಗ್ಗೆ ಹೊರಡುವ ಹೊತ್ತಿಗೆ ಕಾಲಿಗೆ ಚಪ್ಪಲಿಯೇ ಇರಲಿಲ್ಲ. ಬರೀ ಕಾಲಿನಲ್ಲಿಯೇ ನಡೆಯಬೇಕಾಯಿತು ಅದ ಫಲವೇನು ಬಲ್ಲೆಯಾ? ಕಾಲಿಗೆ ನಾಲ್ಕಂಗುಲದ ಮೊಳೆ ಚುಚ್ಚು, ಮೂರು ತಿಂಗಳು ಆಸ್ಪತ್ರೆ!"

"ಹೋದಸಲ ನೀವು ಈ ಕತೆ ಹೇಳಿದಾಗ ಕಾಲಿಗೆ ಚುಚ್ಚಿದ್ದದ್ದು ಒಂದು ಸಣ್ಣ ಚಕ್ಕೆಯ ಚೂರಾಗಿತ್ತು—"

"ಒಂದು ಚಕ್ಕೆಯ ಚೂರು! ನಿನಗೇನು ಒಂದು ಚಕ್ಕೆಯ ಚೂರು ಅಷ್ಟು ಅಲಕ್ಷ್ಯ, ಅಲ್ಲವೇ, ನಿನ್ನ ಮನಸ್ಸನ್ನು ನೋಯಿಸಬಾರದೆಂದು ಮೊಳೆಗೆ ಬದಲಾಗಿ ಚಕ್ಕೆಯ ಚೂರೆಂದು ಹೇಳಿದ್ದೆ.... ಏನಾದರೂ ಇದ್ದಿರಲಿ, ಅಂದಿನಿಂದ ನನ್ನ ಸಾಮಾನು ಕಟ್ಟುವದನ್ನು ನಾನೇ ಮಾಡಿಕೊಳ್ಳಬೇಕೆಂದು ನಿರ್ಧರಮಾಡಿಬಿಟ್ಟೆ."

"ಅಂಥಾ ಖಂಡಿತವಾದ ನಿರ್ಧಾರ ಕಾರ್ಯತಃ ಏನೂ ಕಾಣಲಿಲ್ಲ. ಈ ಪುರಾಣವೆಲ್ಲ ನಾನು ಬಂದು ನಿಮ್ಮ ಸಾಮಾನುಗಳನ್ನು ಕಟ್ಟಿಕೊಡಬೇಕೆಂದೇನು!

"ನಿನಗೆ ಆ ಕಷ್ಟ ಕೊಡುತ್ತೇನೇನು, ಹೇಳು, ಸರಸು. ಆದರೂ, ನಾನು ಆ ಕೆಲಸಕ್ಕೆ ತೊಡಗಿದಾಗ, ನಿನ್ನ ಬೆಂಬಲವಿದ್ದರೆ ವಾಸಿ....ಬೆಳಿಗ್ಯೆ ಒಂಭತ್ತಕ್ಕೆ ಹೊರಡುವದಾದ ..."

"ಆದಾಗದು"

"ಹೋಗಲಿ ಬಿಡು, ಹೋಗಲಿ ಬಿಡು. ನಾನು ಕಟ್ಟುವಾಗ್ಯೆ ನೀನು ಒಂದು ಕುರ್ಚಿ ಹಾಕಿಕೊಂಡು ಕೂತುಕೋ"

"ಅಥವಾ ನೀವೇ ಕುರ್ಚಿಯಮೇಲೆ ಕೂತಿದ್ದು, ನಾನೇ ಕಟ್ಟಿದರೆ?"

"ತಾಳು, ಇದು ಹೊಸ ವಿಚಾರ. ಇದನ್ನು ಆಲೋಚನೆಮಾಡಿಯೇ ಇರಲಿಲ್ಲ....ಅಲ್ಲ, ನನಗೆ ಬೇಕಾಗುವ ಸಮಾನುಗಳನ್ನೇ ಕಟ್ಟುವಿಯೆಂದು ಹೇಗೆ ಹೇಳುವುದು?"

"ಎದುರಿಗೇ ಕುಳಿತು ನೋಡುವುದರಿಂದ".

"ಹೌದು, ಹಾಗೆ ಮಾಡಬಹುದು ...ಅದಕ್ಕೇ ಹೆಂಗಸರ ಬುದ್ಧಿ ಯಾವಾಗಲೂ ಗಂಡಸರ ಬುದ್ಧಿಗಿಂತ ಚುರುಕಾಗಿ ಓಡುತ್ತೆ ಎನ್ನುವುದು"

"ಅವರ ಕೈಗಳೂ ಹಾಗೆಯೇ"

"ಇರಬಹುದು, ಇರಬಹುದು—ಆದರೂ ಆಲೋಚಿಸಬೇಕಾದ ವಿಚಾರ.... ನಿನಗೆ ಬುದ್ಧಿಗೂ ಕೈಗಳಿಗೂ ಎರಡಕ್ಕೂ ಶ್ರಮ ಕೊಡುವುದಕ್ಕೆ ಇಷ್ಟವಿಲ್ಲ. ಹೀಗೆ ಮಾಡೋಣ—ನಾನು ಕುರ್ಚಿಮೇಲೆ ಕೂತು ಯಾವಯಾವುದು ಬೇಕು ಎನ್ನುವುದನ್ನು ಹೇಳುತ್ತೇನೆ. ನೀನು ಅವನ್ನು ತೆಗೆದು ಕಟ್ಟು"

"ಈಗ ನಿಮಗೆ ಏನೇನು ಬೇಕು ಹೇಳಿ"

"ಅದೇ ... ನಿನಗೆ ಗೊತ್ತಿದೆಯಲ್ಲಾ.... ನಾನು ಯಾವಾಗಲೂ ತೆಗೆದುಕೊಳ್ಳುವ ಸಾಮಾನುಗಳು.. ಪಂಚೆ, ಟವಲು ಇತ್ಯಾದಿ ಮದುವೆಯಾಗಿ ಸಂಸಾರ ಶುರುಮಾಡಿ ಇಷ್ಟು ದಿವಸಗಳಾದರೂ, ಇನ್ನು ಕೇಳುತ್ತೀಯಲ್ಲ!

"ಅಂತೂ ಇಷ್ಟಕ್ಕೆ ಬರುವುದೆಂದು ನಾನು ಮೊದಲೇ ತಿಳಿದಿದ್ದೆ. ಆದಕ್ಕೋಸ್ಕರವೇ, ಪತಿವರ್ಯರೆ, ತಾವು ಮನೆಗೆ ಬರುವುದಕ್ಕೆ ಮೊದಲೇ, ಮಧ್ಯಾನ್ಹ ನನ್ನ ಸಾಮಾನುಗಳನ್ನು ಕಟ್ಟಿ ಆದಮೇಲೆ, ನಿಮ್ಮದನ್ನೂ ಕಟ್ಟಿಟ್ಟುಬಿಟ್ಟೆ. ಈಗ ಮುಂದುವರೆಯಲಿ, ತಮ್ಮ ಉಪನ್ಯಾಸ!"

—ಬೀರಣ್ಣ.

---

## "೧೯ಳಳರ ಭೂವಿವರಣೆಯ ಉತ್ತರಗಳು"

**ಬಂಗಾಳಾ ಕೊಲ್ಲಿ—**

ಕ್ಷಾಮದೇವತೆಗೆ ಬಲಿಯಾಗಿ ಈ ಪ್ರದೇಶದಲ್ಲಿ ಸಹಸ್ರಾರು ಮಂದಿ ನೀರು ಪಾಲಾದಮೇಲೆ ಈ ಹೆಸರು ಬಂದಿತು.

**ಕ್ಷಿತಿಜ—**

ವಿಮಾನಗಳು. ಇವುಗಳಲ್ಲಿ ಕೆಲವು ತೆರನಾದುದಿರುವುವು. ಕೆಲವಕ್ಕೆ ಮುದ್ರೆ ಒತ್ತಿರುತ್ತದೆ ತೋಳುಗಳ ಮೇಲೆ ಇನ್ನೂ ಕೆಲವಕ್ಕೆ ಅಡ್ಡಡ್ಡ ಪಟ್ಟೆ ಬಳಿದಿರುತ್ತಾರೆ. ಹಾಗೂ ಕೆಲವಕ್ಕೆ ತ್ರಿಶೂಲಚಿಹ್ನೆಯಿರುತ್ತದೆ. ಕ್ಷಿತಿಯಲ್ಲಿ ಜನಿಸಿದಂತೆ ಕಾಣುವುದರಿಂದ ಈ ಹೆಸರು ಬಂದಿದೆ.

**ದಿಕ್ಕುಗಳು—**

ನಮ್ಮ ದೇಶಕ್ಕೆ ಸದ್ಯಕ್ಕೆ ಎರಡೇ ದಿಕ್ಕುಗಳಿವೆ. ಇಂಗ್ಲೆಂಡು—ಅಮೇರಿಕಾ—ಕಡೆಯ ಪಕ್ಷ ನಾಲ್ಕಾದರೂ ಹೆದ್ದಿಕ್ಕುಗಳಿರಬೇಕಾದಾಗ, ಎರಡೆ ಇರುವುದರಿಂದ ನಾವೆಲ್ಲರೂ ದಿಕ್ಕುಗಾಣದೆ ಹೀಗಿದ್ದೇವೆ.

**ಜ್ವಾಲಾಮುಖಿ—**

ಬೆಂಕಿ ಹೊಗೆಯಾಡುತ್ತಿರುವ ದೂರವಾದ ಸ್ಥಳಗಳು- ಉದಾಹರಣೆ- ಗಂಗಾತೀರ. ರುದ್ರಭೂಮಿ. ಇತ್ತೀಚೀಚೆಗೆ ಈ ಸ್ಥಳಗಳಲ್ಲಿ ಸದಾ ಸರ್ವಕಾಲವೂ ಬೆಂಕಿ ಹೊಗೆಯಾಡುತ್ತಲೇ ಇರುತ್ತವೆ. ಆಳರಸರ ಮತ್ತು ಸಾರ್ವಜನಿಕರ ಪರಸ್ಪರ ಸಹಾಯದಿಂದಲೇ ಇದು ಸಾಧ್ಯವಾಗಿದೆ.

**ಕಣಿವೆ—**

ಎರಡು ಬೆಟ್ಟ, ಸಾಲುಗಳ ಮಧ್ಯೆ ಇರುವ ಪ್ರದೇಶ. ಹಾಗಾಗಿ ಇಲ್ಲಿ ಯಾವಾಗಲೂ ಕಲ್ಲು ನೀರುಬಿದ್ದು ವಡವಡಶಬ್ದ ಉಂಟಾಗುತ್ತದೆ. ಅದಕ್ಕಾಗಿಯೇ ಕಣಿವೆ ಕೆಳಗಿನವರು ತದ್ರೀತಿಯಾದ ತಮಿಳನ್ನೇ ಮಾತನಾಡುವುದು.

**ಮೇರೆಗಳು—**

ದೇಶದ ನಾಲ್ಕು ಮೂಲೆಗಳಲ್ಲೂ ಇರುವ ದೇಶಗಳು. ಇವುಗಳಿಂದಲೇ ದೇಶದ ಸ್ಥಿರತ್ವವು ಯಾ ಅಸ್ಥಿರತ್ವವು ಸಾಧ್ಯವಾಗಿರುವುದು. ಉದಾ: ಅಫ್ಘಾನಿಸ್ಥಾನ, ಬೆಲೂಚಿಸ್ಥಾನ- ಪಾಕಿಸ್ಥಾನ ಮತ್ತು ಹಲವಾರು ಆಸ್ಥಾನಗಳು.

**ಜಲಾಶಯ—**

ನೀರು ನಿಲ್ಲುವ ದೊಡ್ಡ ಸ್ಥಳ. ಈಗಿನಕಾಲದಲ್ಲಿ ಬಡವರ ಕಣ್ಣುಗಳೆಲ್ಲಾ ಜಲಾಶಯಗಳೆ—

---


ಮಕ್ಕಳಿಗೆ ಆರೋಗ್ಯವನ್ನು
ಕೊಡುತ್ತದೆ

ಘರ್ ಕಿ ಲಾಜ್, ಘರ್ ಸಂಸಾರ್

ಇತ್ಯಾದಿ ಚಿತ್ರಗಳನ್ನು ತಯಾರಿಸಿ

ಖ್ಯಾತಿಪಡೆದ

## ವಿ. ಯಂ. ವ್ಯಾಸ್ ರವರ

ಇನ್ನೊಂದು ಹೊಸ ಚಿತ್ರಪಟ

# ಘರ್ ಕೀ ಶೋಭಾ

**ಯಶೋಧರಾ ಖಟ್ಜು - ರಮೇಶ ಸೈಗಲ್**

**ಸುವರ್ಣ ಲತಾ - ಜಗದೀಶ್**

ಇತ್ಯಾದಿ, ಇತ್ಯಾದಿ.



ವಿವರಗಳಿಗೆ:

**ಗುಡ್‌ವಿನ್ ಪಿಕ್ಚರ್ಸ್ ಕಾರ್ಪೊರೇಷನ್**

ಸುಬೇದಾರ್ ಛತ್ರಂ ರಸ್ತೆ, ಬೆಂಗಳೂರು ಸಿಟಿ

ಅಲ್ಲದೆ, ಬೆಜವಾಡ – ತಿರುಚನಾಪಳ್ಳಿ – ಎರ್ನಾಕುಲಂ – ಶಾಖೆಗಳು.

— ಬರೆಯಿರಿ.

